ಪ್ಪಿರೆ ಪಡೆದಳ್ ಭಯಂ ಗಡ ನಯಂ ಗಡ ಬೇನೆಯ ಸೂೞ್ ಗಡೆಂದು ತ
ತ್ಪುರದ ಪುರಂಧ್ರಿಯರ್ ಸತಿಗೆ ತೂಪಿಱಿದರ್ ಸ್ವಗೃಹಾಂತರಂಗದೊಳ್ ೫೮

ದೆಸೆಯಂ ತೆಕ್ಕನೆ ತೀವಿದತ್ತು ಘನಭೇರಿನಿಸ್ವನಂ ಭೋಂಕನಾ
ಗಸದೊಳ್ ಸಾಲ್ವಡೆದತ್ತು ವೀಧಿಗತನಾರೀಮುಷ್ಟಿಪಿಷ್ಟಾತಕ
ಪ್ರಸರಂ ತೋರಣಮೊಪ್ಪಿದತ್ತು ತರದಿಂ ದ್ವಾರಪ್ರದೇಶಂಗಳಂ
ಪೊಸತಂ ನ[1]ರ್ತಿ[1]ಸಿದತ್ತು ಮಾಲೆ ಗುಡಿ ಸೌಧೋತ್ಸಂಗರಂಗಂಗಳೊಳ್ ೫೯

ಎಳನಭದಂತೆವೋಲ್ ಸಸಿಯನಪ್ಪಿದುದಪ್ಪುಮನೀ[2]ರ್ಷ್ಯೆ[2]ಯಂತೆವೋಲ್
ತುಱಿದುದು ಧೂಮವಹ್ನಿ ಬಲವಂದುದು ದೈವತಭಕ್ತನಂತೆವೋ
ಲೆಳಸಿದುದಿಚ್ಛೆ ಬೆಳ್ಚಮರಿ[3]ಪಣ್ಣನೆಲರ್ ಸುಖ[3]ದಂತೆವೋಲ್ ಕರಂ
ಬೆಳಗಿದುದಂತರಿಕ್ಷವಳಯಂ ವಿಳಸ[4]ನ್ಮ[4] ಕರಂದದಂತೆವೋಲ್? ೬೦

ವಿಲಸನ್ನಿತ್ಯೋದಯಾಲಂಕೃತನಸಮಹಯಪ್ರೌಢನಕ್ಷುಣ್ಣಲಕ್ಷ್ಮೀ
ನಿಲಯಂ ಸನ್ಮಂಡಲಾಗ್ರಸ್ಫುರಿತಕರಹತೋದ್ವೃತ್ತರಾಜಂ ಮಹೀಭೃ
ತ್ಕುಲಮಸ್ತನ್ಯಸ್ತಪಾದಂ ಸಮುದಿತವಿನತಾನಂದನಂ ವೃತ್ತವೀತಾ
ಖಿಲದೋಷಂ ದ್ಯೋತಿತಾಶಾಂಬರಮುಖನೊಗೆದಂ ಭವ್ಯಲೋಕೈಕಮಿತ್ರಂ* ೬೧

ತೊಟ್ಟಿಲ ತೂಕದೊಳ್ ಕಂಕಣ ಝುಂಕೃತಿ ದಿಟ್ಟಿ ಸೂರ್ಕೆಯಂ
ನಿಟ್ಟಿಸೆ ಜಿಹ್ವೆ ಕಾವಳನ ಕಾಕುಪಟುಧ್ವನಿರಾಗದಿಂ ಪದಂ
ಬಟ್ಟಿರೆ ದೇವಿಯರ್ ಕೆಲದೊಳಿರ್ದ ಕುಮಾರನ ಮುದ್ದು ಹರ್ಷಮಂ
ಪುಟ್ಟಿಸೆ ಕೂಡೆ ಪಾಡಿದುದು ಜೋಗುಳಮಂ ಪುರಕಾಮಿನೀಜನಂ ೬೨

ಱುದಿರು ಕೃಷ್ಣ ಕೃಷ್ಣ ಮೊಲೆಯಂ ಕೊ[5]ಡು ಬಂದು ಯಶೋದೆ ಬಾಲನ[5]
ತ್ತಿಱಿಪಿಡು ಬಂದಳಕ್ಕನಿದೆ ಜೋಗುಳಮಂ ಶ್ರುತಿದೇವಿ ಕೂಡೆ ಪಾ
ಡೆಱಲೆ ತಗ್ಗುಳ್ಚಿ ಕಟ್ಟು ಕುಲದೇವತೆ ರತ್ನದ ಚೆಂಡನೆಂದು ಮು
ದ್ದುಱುಗಿಸೆ ಗೋಪಿಯರ್ ಪಿಡಿದು ತೊಟ್ಟಿಲೊಳೊಯ್ಯನೆ ತೂಗಿ ಪಾಡಿದರ್ ೬೩

ಕಂದ ಜೋ ವಸುಪೂಜ್ಯವರ್ಧನ ಜೋ ಪುರಂದರನಾಥ ಜೋ •
ಕುಂದಕುಟ್ಮಳದಂತ ಜೋ ಕಮಲಾಕ್ಷ ಜೋ ಪರಮಾತ್ಮ ಜೋ
ಮಂದರಾಗ್ರಮಹಾಭಿಷೇಕವಿಭೂತಿಸಂಗತಸತ್ವ ಜೋ
ಯೆಂದು ಪಾಡಿದರುಱ್ಕಿಱಿಂ ನೆರೆದಿಂದುವಕ್ತ್ರೆಯರೀಶನಂ ೬೪

---

1ರ್ಚಿ (ಕ) 2ಷೆ (ಖಬ) 3ಪೊಣ್ಣನೆಲರ್ ಶುಕ (ಖಬ) 4ನ್ಮು (ಖಬ) 5ಕೊಡಬಂದಳೆಸೋದೆ ಬಾಲನಂ (ಖಬ) ★ ಈ ಪದ್ಯ (ಕ) ಪದ್ಯಯಲ್ಲಿಲ್ಲ.

ಒದೆದು ಪಾಸಿಕೆಯಂ ಕಡಂಗಿ ಮರುಳ್ದುವಳ್ಳಿದಾಡುವಂ
ವದನಮಂ ನೋಡಿ ನೋಡಿ ದಾಯೆನೆ ನೋಡುವಂ ದನಿದೋಱುವಂ
ಪದುಳವೆತ್ತಿದೊಡಕ್ಕೆ ತೊಟ್ಟನೆ ಪಿಂಗೆ ಮೆಲ್ಲಗೆ ಬೀಱುವಂ
ಸುದತಿಯರ್ಕಳನಿಂತು ಮೆಚ್ಚಿಸಿದಂಬ ಯಶೋದೆಯ ನಂದನಂ ೬೫

ಕವಡಿಕೆ ಭಾಳದಂಡದೊಳೊಡಂಬಡೆ ದಾದಿಯರಿಕ್ಕೆಲಂಗಳೊಳ್
ಸವಡಿಸಿ ಸಾರ್ಚೆ ದಟ್ಟಡಿಯೊಳೆತ್ತಿರುತಿರ್ದನನಾರ ಬೊಪ್ಪನೀ
ಕವಡೆಯ ಬೊಪ್ಪನೆಂದು ನಡೆನೋಡಿದರೞ್ಕೊಳಪ್ಪುಕೆಯ್ವಿನಂ
ಕವಡೆಯ ಬೊಪ್ಪನೆಂಬ ಪೆಸರಗ್ಗಳಮೊಪ್ಪಿದುದಾ ಕುಮಾರನೊಳ್ ೬೬

ಮಾಣದೆ ಧೂಲಿಮಾಳಿಗೆಗಡಂಗುವ ಸಾರ್ಚಿದ ತಾಯ ಜಂಘೆ ನಿ
ಶ್ರೇಣಿವೊಲಾಗೆ ಮೆಟ್ಟಿ ತೊಡೆಯೇಱುವ ಚಿತ್ರದ ಪಣ್ಬಲಂಗಳಂ
ಕಾಣಿಸೆ ದಾದಿಯಂ ಬಿಡದೆ ಬೇಡುವ ಕಂಡರ ಹಸ್ತವಾದ್ಯಕ
ಲ್ಯಾಣರವಕ್ಕೆ ನರ್ತಿಸುವ ಮುದ್ದುಗಳೊಪ್ಪಿದುದಾ ಕುಮಾರನೊಳ್ ೬೭

ಅಪ್ಪಪ್ಪೆಂದೊಡೆ ಬಂದಮ
ರ್ದಪ್ಪುವ ಚುಂಬಿಸಿದಡೊಡನೆ ಚುಂಬಿಸುವಂ ತೊದ
ಳ್ಪಪ್ಪ ನುಡಿಯಡಸೆ ಮಾಣದೆ
ತುಪ್ಪದ ಕಡುಮುದ್ದು ಪೊರ್ಗೆ ಪಡೆದುದು ಮುದಮಂ ೬೮

ಮನ್ನಣೆವೆತ್ತ ದಾದಿಯರ ಕೈಗೆ ನೃಪಾಲನ ಕೈಗೆ ಸನ್ನೆಯಿಂ
ಸನ್ನೆಯ ಮಾಡೆ ನೀಱೆಯರ ಕೈಗೆ ತದಂತರದಿಂದ ಬರ್ಪನಂ
ಮುನ್ನಮೆನಿಪ್ಪ ಮುದ್ದುತನದಿಂ ಜಯದೇವಿಯ ಸೂನು ಕಂದುಕಂ
ಕನ್ನಡಿ ಹೊನ್ನ ವೀಣೆ ಪಿಡಿದಾಡುವ ತಾವರೆಯೆಂಬ ಮಾೞ್ಕೆಯಿಂ ೬೯

ಪರಮಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ ಸರೋರುಹೋ
ದರನನಿದಾರ ಮಾಣಿಕವಿದಾರ ನಿಧಾನವಿದಾರ ಮುದ್ದಿದಾ
ರರಸನಿದಾರ ಬಲ್ಲಹನಿದಾರ ಕರೀಮದ್ರನಿದಾರ ಸಿಂಹವೆಂ
ದಿರದಮರ್ದ[1]ಪ್ಪಿದಳ್ ಪ[1]ದಪಿನಿಂ ಮೊಲೆವಾಲ್ ತೊರೆದೆಚ್ಚು ಪಾಯ್ವಿನಂ ೭೦

(ಜಗನ್ನಾಥವಿಜಯಂ ೩-೩೯)

ಉದರಮೆ ತೊಟ್ಟಿಲಾಗೆ ಭುವನತ್ರಯಮಂ ನೋಡಿ ತಾಳ್ದಿ ದೇಹವ
ರ್ಗದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯಂ

1 ಪ್ಪಿ ತಪ್ಪ (ಖಬ)

ಪದುಳದೆ ತೊಟ್ಟಿಲೊಳ್ [1]ಪಡಿಸಿ[1] ತೂಗಿದರಚುತ್ಯ ಜೋ ಮಹಾತ್ಮ ಜೋ
ಸದಮಲಬೋಧ ಜೋ ಪರಮ ಜೋ ಹರಿ ಜೋ ಎನುತುಂ ಲತಾಂಗಿಯರ್೭೧

(ಜಗನ್ನಾಥವಿಜಯಂ ೩-೨೮)

ಶಕಟವಿಮರ್ದ[2]ನಾ[2] ಮುಸಲಿ ಬಾರದ [3]ಮುನ್ನಮೆ[3] ನಮ್ಮ ಹೇಮ ಘಂ
ಟಿಕೆ ಘಣಿಳೆಂಬ ನಂದಿನಿಯ ಪಾ[4]ಲನಿದಂ[4] ಕುಡಿಯಲ್ಕೆ ನಿನ್ನ ಚಂ
ಡಿಕೆ ಬೆಳೆದಪ್ಪುದೆಂಬ[5]ದೆನುತೆ[5] ನಂಬಿಸೆ ಪಾಲ್ಗುಡಿ[6]ದಬ್ಬೆಯೆನ್ನೆ[6] ಚಂ
ಡಿಕೆಯೆನಿತುದ್ದಮಾದುದೆನುತುಂ ಬೆಸಗೊಳ್ವ ಮುಕುಂದನೊಪ್ಪಿದಂ ೭೨

(ಜಗನ್ನಾಥವಿಜಯಂ ೩-೫೨)

ಘನಕುಚೆ ಗೋಪಿ ಪಾಲ್ಗಡೆಯುತುಂ ಮನೆವಾೞ್ತೆಗೆ ಪೋಗೆ ಗೆಜ್ಜೆಯಿಂ
ದನಿ ನಸುಪೊಣ್ಮಂತು ಪರಿತಂದೆಡಗೆಯ್ಯೊಳೆ ತೋಡಿ ಬೆಣ್ಣೆಯಂ
ತಿನುತಿರೆ ಗೋಪಿ ಕಂಡೆಲೆಲೆ ಕಳ್ಳತನಂಗಳನಣ್ಣ ಕಂಡೆವಾ
ವೆನೆ ಕಡೆವಾಯ ಬೆಣ್ಣೆವೆರಸೊಯ್ಯನೆ ಪಿಂಗುವ ಕೃಷ್ಣನೊಪ್ಪಿದಂ ೭೩

(ಜಗನ್ನಾಥವಿಜಯಂ ೩-೫೧)

ಬಿಂಬಫಲೋಪಮಾನ ರದನಚ್ಛದಮಂ ನಸುಗಚ್ಚಿ ದಾದಿ ಮ
ಣ್ದಿಂಬನನೞ್ಕೞಿಂದೊಗೆಯೆ ಹೂಂಕೃತ ತರ್ಜನಿಯಂ ನೊಸಲ್ಗೆದಂ
ದಿಂ ಬಡಿದಪ್ಪೆನೆಂದೊಡಗಿದಪ್ಪಿ ಮುಗುಳ್ನಗೆ ನಕ್ಕು ಗೋಪಿಯಂ
ನಂಬಿಸಿ ಸಾರ್ಚೆ ಚುಂಬಿಸುವ ಕೃಷ್ಣನ ಮುದ್ದು ಕರಂ ಮನೋಹರಂ ೭೪

ಆ[7]ಳರೆಲೆ[7]ಯತ್ತಿ ಕಾಯ್ ಪುಲಿಯುಗುರ್ ನಿಗಳಂ ಕಿಱುಗೆಜ್ಜೆ ಬಂದಿ ಕಂ
ಗೋಳಿಸುವ ರಕ್ಕೆ ಸಂಕೊಲೆ ಘಣಿಲ್ಗ ರೆ[8]ದೊ[8]ಪ್ಪುವ ಗಂಟೆ ನೇವುರಂ
ಪೊಳೆಪಳವಟ್ಟು ತೋರ್ಪ ಕುೞಿಯುಣ್ಣೆಯ ಪೆಂ[9]ಡೆ[9]ರವೆಂಬಿವೊಂದಿ [10]ಗೊಂ[10]
ದಳಿಸಿರೆ ಬಾಲವಂದದ ತೆರಳ್ಕೆಯಿನಚ್ಯುತನಾದಮೊಪ್ಪಿದಂ ೭೫

ಎಡೆಗಿಱಿಂದಿರೆ ಪೊಂಗವಡಿಕೆ
*ಯುಡೆವಣಿ ಕಿಱುಗೆಜ್ಜೆ ಮಿಱುಗೆ ದಶನಾಂಶುವಮ
[11]ಳ್ದೆ ಡೆಯುರಳಲ್ ನಡೆಗೊಂಡೊ[11]
ಳ್ಮಡಿಯ* ಬೆಡಂಗಸುರವೈರಿಗಡಿಗಡಿಗೆಸೆಗುಂ ೭೬

(ಜಗನ್ನಾಥವಿಜಯಂ ೩-೪೫)

---

1ನಿರಿಸಿ (ಖಬ) 2ನಂ (ಕ) ನೀ (ಖಬ) 3ಮುಂಕುಡಿ (ಖಬ) 4ಲಿದನೀಂ (ಅ) 5ದಬಲೆ (ಅ) ದೆಶೋದೆ (ಕ) 6ದೀಗಳಬ್ಬೆ (ಅ) 7ಅಳಕಡ್ಡಿ (ಕ) ಅರಳೆಲೆ (ಖಬ) 8ನೊ (ಕ) 9ಚ (ಕಖಬ) 10ನಾಂ (ಕ) 11ಳ್ದೆಡೆಯೆನತಳರ್ನೆಡೆಗೊಂಡೊ (ಕ) ಱುಬಿಡೆ ಘಲ್ಕನೆ ಗೆಜ್ಜೆ ಮಿಱುಗೆ ದಶನಾಂಶು ಕುರುಳ್ ಜಡಿಯೆ ತೊದಲ್ನುಡಿಯ ತಳರ್ ನಡೆಯೆ (ಅ)

ಕನಕ[1]ಮಣಿ[1] ಕಿಂಕಿಣೀಮೃದು
ನಿನದು ಕಟಿತಟದೊಳೆಸೆಯೆ ದಾದಿಯರೊಡವಂ
ದಿನಿಸಂ ನಡೆಯಿಸೆ ಲಲಿತೇಂ
ದ್ರನೀಲಮಣಿಭೂಮಿಯೊಳ್ ತಳರ್ನಡೆ [2]ನಡೆ[2]ದಂ ೭೭

( ಆದಿಪುರಾಣಂ ೮-೨)

ಶ್ರೀಪತಿ ಸುರದಾರಕರೊಡ
[3]ನೇ[3]ವೊಱ್ತುಂ ನೆಱೆದು ರತ್ನಧೂಳೀಪಟಲ
ವ್ಯಾಪಿತ ತನು ಮೃದುಮುಗ್ಧಾ
ಳಾಪಂ ಬಳೆದಂ ಸರಸ್ವತಗೀಮಣಿಹಾರಂ ೭೮

( ಆದಿಪುರಾಣಂ ೮-೧)

ಓರಂತೆ ಮೆಚ್ಚಿದಂ ಕೃತಿ
ಸಾರಂ ಸುತವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೭೯

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್
ಕುಮಾರೋದಯವರ್ಣನಂ ಸಪ್ತಮಾಶ್ವಾಸಂ ಸಂಪೂರ್ಣಂ

---

1 ಕಟಿ (ಕಖಬ) 2 ತಂ (ಕಖಬ) 3 ನಾ (ಅಖಬ)

# ಚಂದ್ರೋದಯವರ್ಣನಂ

ಮೊದಲೊಳ್ ನೇಸಱ ಪಕ್ಕೆ ಕೋಕವಿರಹಂ ಸಂಕೋಚಪದ್ಮಂ ತಮಂ
ಪುದಿದಾ ಸಂಜೆಯ ತೂರ್ಯಮಾ ಕುಲಟೆಯರ್ ತಾರಾಳಿ ದೀಪಂ ಬಱಿ
ಕ್ಕುದಯಂ ಕೆಂಪೆಳಗರ್ಪು ಚಂದ್ರಿಕೆ ಚಕೋರಂ ನೈದಿಲಿಂದೂಪಲಂ
ಮದಿರಾಂದೋಳವಿಹಾರಲೀಲೆಯಿನಿತುಂ ಚಂದ್ರೋದಯಕ್ಕಾಸ್ಪದಂ ೧

ದಿವಸಕ [1]ರಾಪ[1] ಸಾರಣದೊಳೆಯ್ದಿಸಿ ಬೆನ್ನನೆ ಬರ್ಪ ಪೆರ್ಬಲ
ಕ್ಕವತಮಸಪ್ರಚಂಡಚರ ರಿಕ್ಕಿದ ಸೊಪ್ಪೆನೆ ಬೆಂ[3]ದುಱಿ[3]ಬಿನೊಳ್
ಕವಿ[4]ವ[4] ಬಿಸಿಲ್ಗಳೇಂ ಮಱಸಲಾರ್ತುದೊ ತೀವ್ರ ಕರಾಭಿಘಾತದಿಂ
ದವನಿಯ ಬೆಂದ ಪುಣ್ಣ ಕಲೆಗಳ್ ಮಿಗೆ[5] ಕೆಂಗಲೆಗಟ್ಟಿದಂದದಿಂ[5] ೨

(ಅನಂತನಾಥಪುರಾಣಂ ೭-೬೯)

ಒದವಿ ಪೊದಱ್ದು ಪಜ್ಜಳಿಪ ತೇಜದ ಸುಯ್ಯಱಿ ಕಾಯ್ಪೆಯೋಡಿ ಪ
ಣ್ತುದು ಬಿಸಿಲೆಂಬಿನಂ ಬಿಸಿಲೊಳಾದುದು ಕೆಂಪು ಬಱಿಕ್ಕೆ ಪಾಱಿ ಪೋ
ದುದು ಬಿಸಿಲೊಪ್ಪಿದೊಂದರಿಸಿನಕ್ಕೆಣೆಯಾಯ್ತು ಬಿಸಿಲ್ ಬಿಸಿಲ್ಗೊಡ
ರ್ಚಿದ ವಿಹಗಾಳಿವೊಲ್ ಬಱಿಯವೊರ್ಬುಳಿಗೊಂಡುವು ಸೂರ್ಯರಶ್ಮಿಗಳ್ ೩

ನವ ನಳಿನೀವನಂಗಳ ಪರಾಗರಜಂಗಳನುಂಡು ಮುನ್ನ[6]ವಾಂ[6]
ತವ[7]ಗ[7] ವಿಯತ್ತಳಭ್ರಮಣವಿಹ್ವಲನಾಗಿ ಬೞಲ್ದು [8]ಕಾಱುವಂ
ತೆವೊಲಿರೆ[8] ಕೆಂಪು ತತ್ಕಮಳಕಾನನಕಂಟಕಲಗ್ನಪಾದ[9]ನಾ[9]
ದವೊಲುಡುಗುತ್ತಮಾತ್ಮಕರಮಂ ರವಿ ಪೊರ್ದಿದನಸ್ತಶೈಲಮಂ ೪

(ಪಂಪಭಾರತಂ ೪-೪೬)

ಇಳೆಯಿಂದಂ ಪೊಂಬಿಸಲ್ ಮೆಯ್ದೆಗೆದು ನಗನಿಕಾಯಾಗ್ರದೊಳ್ ಸಾಂದ್ರಧಾತು
ಸ್ಥ[10]ಳಿ[10]ಹರ್ಮ್ಯಾಗ್ರದೊಳ್ ಮಾಣಿಕದ ಶಿಖರಮುದ್ಯಾನ[11]ಶಾಖಾಗ್ರ[11]ದೊಳ್ ಕೆಂ

---

1ರಪ್ರ (ಖಬ) 2ಗಿ (ಖಬ) 3ದಿಱಿಂ (ಖಬ) 4ಲ (ಅ) 5ಕಂಗೆಲೆ ಕಟ್ಟಿತೆಂಬಿನಂ (ಖಬ) 6ಮಂ (ಅ) 7ನ (ಅ)
8ಕಾಂಸದುಂದದೊಳಿರೆ (ಕ) ಕೌಂಸವಂಡವೊಲಿರೆ (ಖಬ) 9ವಾ (ಕಖಬ) 10ಳ (ಕ) 11ಮಾಲಾ (ಅ)

ದಳಿರೆಂಬಾಶಂಕೆಯಂ ಮಾಱ್ಪಿನಮರುಣತೆ[1]ಯಂ ಪೆತ್ತು[1] ಚೆಲ್ವಾದುದಸ್ತಾ
ಚಳತುಂಗವ್ಯಾಘ್ರಜೃಂ[2]ಭಾವೃತವದನಮೆನಿಪ್ಪಂ[2]ದದಿ ಭಾನುಬಿಂಬಂ ೫

(ಜಗನ್ನಾಥ ವಿಜಯಂ ೧೬-೯೩)

ದಿನಲಕ್ಷ್ಮೀಕಾಂತೆ ಮೈವಿಟ್ಟೆ ಱೆ[3]ದು[3] ಗಗನರಂಗಾಗ್ರದಿಂ ವಾರುಣೀಸೇ
ವನೆಗೆಯ್ತರ್ಪಲ್ಲಿ ಕಾಲಿಂ ನವಮಣಿ[4]ಘನ[4]ಮಂಜೀರಕಂ ನು[5]ಣ್ಬುಮಂ[5] ತೀ
ವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿಶಿರೋಭಾಗದೊಳ್ ಬೀೞ್ದೆಂಬಂ
ತಿನಬಿಂಬಂ ರಂಜಿಸಿತ್ತಸ್ತಮಯ ಸಮಯದೊಳ್ ಮುಕ್ತ ಪಾದಾವಲಂಬಂ ೬

(ಕಾದಂಬರಿ ಪೂ. ಭಾ. ೫೦೭)

ವನಿತಾಪಾನಕದೊಂದು ಪೊೞ್ತು ಸುವಿಟರ್ ಕಯ್ಗೆಯ್ದು ಲೀಲಾವಿನೋ
ದನದಿಂ ಕೇರಿಗೆ ಬರ್ಪ ಪೊೞ್ತು ಗಣಿಕಾಸಂದೋಹಮೊಂದಾಗಿ ಮೆ
ಲ್ಲನೆ ಬಂದೊತ್ತೆಗೆ ನಿಲ್ವ ಪೊೞ್ತು ಬಗೆ ಬಂದೀ ಪೊೞ್ತು ತಂಪೊೞ್ತು ಪೂ
ವಿನ ಪೊೞ್ತುಂಬಿನಮಾಯ್ತು[6]ಧಾರಿ[6]ಣಿಗೆ ಭಾಸ್ವನ್ಮಂಡಲಂ ಕುಂಡಲಂ ೭

ಅಸುರರ ನೆತ್ತರೊಳ್ ಪೊರೆದ ಕೈದುಗಳಂ ತೊಳೆಯಲ್ ತಗುಳ್ದು ಧೂ
ಪಿಸಿದ ಹಯಂಗಳಂ ಜಲದೊಳಿಕ್ಕಲಿಳಾತಳಮಂ ನಿರಂತರಂ
ಬಿಸಿಗದಿರಿಂದೆ ನೋಯಿಸಿದ ಪಾಪಾಮನಿಲ್ಲಿಯೆ ನೀಗಲೆಂದು ಬಮ
ದೊಸೆದಪರಾರ್ಣವಕ್ಕೆ ಪರಿವಂತಿನನೆಯ್ದಿದನಸ್ತಶೈಲಮಂ ೮

ನಳಿದೀಸಂ ಪತ್ತೆ ಸೂತಂ ಪೆಱಗುಡುಗೆ ಹಯಂ ಜಾಱೆ ತೋಳ್ ಪಾಱೆ ತೇರ್ ವ್ಯಾ
ಕುಳ ಚಕ್ರಂ ಸಿಲ್ಕೆ ಶೃಂಗಾಗ್ರದಿನಿೞಿವೆಡೆಯೊಳ್ ಪದ್ಮಿನೀದೇಶಕೋಶಾ
ವಳಿಯಂ ಕೈಕೊಂಡು ಬೆಂಬತ್ತಿಸೆ ತಿಮಿರಬಲಂ ಕಂಡು ತಾಂ ಸೂರ್ಯನಸ್ತಾ
ಚಳದೊಳ್ ಕೆಂಬಟ್ಟೆಯೊಂದಡ್ಡಣದೊಳೆ ಮುಗುತೆಡ್ಡಮಾಯ್ತರ್ಕಬಿಂಬಂ ೯

ಕಡುಬಿಸುಪಾಱೆ ಬೆಳ್ಪಣಮೆ ಪಾಱೆ ಕರಂ ಕರಮೆಲ್ಲಪಕ್ಕದಿಂ
ದುಡುಗೆ ನಿಜಾಂಗತುಂಗಧವಳಾಕೃತಿ ಕಾಸಿದ ಬಟ್ಟಿನಂತಗೆ ಕೆಂ
ಪಡರ್ದಿರೆ ತನ್ನ ಮುನ್ನೊಗೆದ ತತ್ತಿಯ ರೂಪನೆ ಪೋಲ್ತು ಜಾಜಿನೊಳ್
ತೊಡರ್ದವೊಲೊಪ್ಪಿದಂ ಗಗನವೃಕ್ಷದ ಪಣ್ಗೆಣೆಯಾಗಿ ಭಾಸ್ಕರಂ ೧೦

ಕುವಲಯ ಪೀಡೆಯಂ ಪಡೆದು ಪುಷ್ಪಿತಪದ್ಮಿನಿಗೋತು ಕಾಯ್ಪು ಸಂ
ಭವಿಸಿರೆ ಮಂಡಲಾಗ್ರಕರಮಂ ಕುಲಗೋತ್ರಶಿರಕ್ಕೆ ನೀಡುತಿ

1ಪೆತ್ತಿರ್ದು (ಅ) 2ಬಧ್ವನಿತವಿವರಮೆಂಬಂ (ಖಬ) 3ಯೆ (ಖಬ) 4ಮಯ (ಅ) 5ಣ್ಣುತಂ (ಅ) 6ವಾರು (ಖಬ)

ರ್ಪವಗುಣದಿಂದಮೆಯ್ದಿದುದಧೋಗತಿಯೆಂದು ವಿರಕ್ತನಾದವೋಲ್
ದಿವಕರನಂಬರಂದೊಱೆದು ಪಶ್ಚಿಮಾವಾರ್ಧಿಗೆ ಮೆಯ್ಯನಿಕ್ಕಿದಂ* ೧೧

(ಜಗನ್ನಾಥವಿಜಯಂ ೧೬-೯೪)

ಇನಿಸುಂ ಪೊಂಗಾಱಿ ಮೇಲುಚ್ಚಳಿಸೆ ಹಯಿಚಯಸ್ಕಂಧಮಂ ತೇರಕೋಳಾ
ರ್ವಿನೆಗಂ ಮಾರ್ಕೊಮಡು ನೇನಂ ಮಲರೆ ತೆಗೆವಿನಂ ಸೂತನಶ್ವವ್ರಜಂ ತೊ
ಟ್ಟೆನೆ ಕಿಱಿಂ ಕರ್ಚಿ ಭೋರೆಂದುರುಳೆ ಪರಿವಿನಂ ಸಾರ್ದನಸ್ತಾದ್ರಿಯಂ ಕಾಂ
ಚನರಾಜಿಷ್ಣುಪ್ರಭಾಪಿಂಜರಿತಕಬಳಿತವ್ಯೋಮರಂಗಂ ಪತಂಗಂ ೧೨

ಪುಡುವ ಕುದರೆ ಬೆಸಂಗೊಂ
ಡೋಡುವ ತೇರ್ಗೊಂದೆಗಾಲಿ [1]ಪೊಡೆವಂ[1] ಪೆಱಿವಂ
ಕೇಡಿಂಗಲಸಿದೊಡಕ್ಕುಮೆ
ನೋಡಿರೆ ರವಿ ಕೆಡೆದನಸ್ತಗಿರಿ ಮಸ್ತಕದೊಳ್ ೧೩

(ಲೀಲಾವತಿ ೧೦-೧೭ ನೇಮಿನಾಥಪುರಾಣಂ ೫-೧೪)

★ ಈ ಪದ್ಯವಾದ ಮೇಲೆ (ಖಬ) ಪ್ರತಿಗಳಲ್ಲಿ ಮುಂದಿನ ನಾಲ್ಕು ಪದ್ಯಗಳು ಹೆಚ್ಚಾಗಿವೆ :

ಘುಲಘುಲನೆಂದು ಸಂಜೆವಱೆ ಸಾಱೆ ಧರಾತಳದುಷ್ಣವಾಱೆ ಮಾ
ರ್ಮಲೆವಪರಾಬ್ಧಿ ಕೆಂಪು ನಸುದೋಱೆ ಸರೋಜದ ಲಕ್ಷ್ಮಿ ಜಾಱೆ ಸೈ
ದಿಲಬಳಗಮ ಪೊದಱ್ದು ನಯವೇಱೆ ರಥಾಂಗವಗಲ್ದು ಪಾಱೆ ಕ
ತ್ತಲೆಯ ಸೆಂಗುದೋಱೆ ದಿನನಾಯಕನೇಱಿದನಸ್ತ ಶೈಲಮಂ ೧

ಖಗತತಿ ಗೂಡ ಸಾರೆ ಬಿಗಿದಿರ್ದ ರಥಾಂಗಕೆ ಬಾಧೆ ಸಾರೆ ಕೇಳ್
ಗಗನಕೆ ತಾರೆ ಸಾರೆ ಯುವತೀಕುಚಮಧ್ಯಕೆ ಕಂತು ಸಾರೆ ಮೆ
ಲ್ಲಗೆ ಕುಮುದಕ್ಕೆ ಸಾರೆ ಧರೆಗೆಯ್ದೆ ತಮಂ ನೆಱೆ ಸಾರೆ ಸಾಗರ
ಕ್ಕೊಗುಮಿಗೆ ಪೆರ್ಚು ಸಾರಲಪರಾಬ್ಧಿಯನೆಯ್ದಿದನಾ ದಿವಾಕರಂ ೨

ಖಗತತಿಗೂಡನೆಯ್ದೆ ಪೊಣರ್ವಕ್ಕಿಗಳಿರ್ಕೆಯನೆಯ್ದೆಯಂಬುಜಂ
ದುಗುಡಮನೆಯ್ದೆ ಯುತ್ಪಲಿನಿ ಹಾಸ್ಯಮನೆಯ್ದೆ ಯೊಲ್ದು ಪಾಣ್ಬರೋ
ಯ್ಯಗೆ ನಿಜಸೂಚಿಕಾಗೃಹಮನೆಯ್ದೆ ವಿಯೋಗಿಗಳಂಗಜಾಸ್ತ್ರದ
ಗ್ನಿಗೆ ಗುಱಿಯಾಗಲೆಯ್ದೆ ದಿನನಾಯಕನೆಯ್ದಿದನಸ್ತಶೈಲಮಂ ೩

ಸುಳಿವಳಿ ಪೊತ ಗೊಂಚಲೊಳಡಂಗೆ ಸುರುಳ್ದು ಮರಾಳಮಂಬುಜಂ
ಗಳ ಮಱೆಯೊಳ್ ಸುಯಿಲ್ಗಱೆಯೆ ಬಗ್ಗಿಸುವಗ್ಗದ ಕೋಕಿಳಾಳಿ ಕೆಂ
ದಳಿರೊಳೆ ದೂರಿಸುತ್ತಿರೆ ಶುಕಾವಳಿ ಪಣ್ಗಳನೊತ್ತುಗೊಂಡು ಕಂ
ಗಳನರೆ ಮುಚ್ಚಿ ತೂಂಕಡಿಸೆ ಸಾರ್ದನಹಸ್ಪತಿ ಪಶ್ಚಿಮಾದ್ರಿಯಂ ೪

1 ಸೂತಂ (ಅ) ಎಸೆಪಂ (ತ)

ಉರವಣೆಯಿಂ ಕಾಲಗಜಮ
ಮರವಾಯ್ದುದು [1]ವಸ್ತ[1]ವೆಂಬ ಚೆಂದೆಂಗಿಂದಮ
ಸರಸಿರುಹಮಿತ್ರಮಂಡಲ
ಪರಿಗತಫಲಮೋಡಿ ಬಿರ್ದುದಪರಾಂಬುಧಿಯೊಳ್ ೧೪

ಮುನಿಹಸ್ತಾಂಬುಜದಿಂದ ಮರ್ಘ್ಯಜಲಜಾಲಂ ಬೀೞ್ ನೀ[2]ಲಾಬ್ಜಕಾ[2]
ನನದೊಳ ಪಾಯ್ದಳಿ ಬೀೞ್ ಜಾರರೆದೆಯೊಳ್ ರತ್ಯುತ್ಸವಮ ಬೀೞ್ ಪ
ದ್ಮಿನಿ ಬೆಂಬೀೞ್ ಒೞಲ್ದು ಬೀೞ್ವ ಹತಕೋಕಾನೀಕದಿಂದುರ್ಬಿಕ
ಣ್ಬನಿಗಳ್ ಭೋರೆನೆ ಬೀೞ್ ಬಿೞ್ದನಪರಾಂಭೋರಾಶಿಯೊಳ್ ಭಾಸ್ಕರಂ ೧೫

[3]ಕೞ[3]ವದನಾದ ಭಾಸುರವಿಸಿಲ್ ತೆರೆಯಂತಿರೆ ಬಟ್ಟಲಿಟ್ಟು ತಂ
ದೀೞಿಪಿದ ಲೋವೆಯಂತಿರಪರಾಚಲಕೋಟಿ ನಿಶಾತಮಿ[4]ಸ್ರದೊಳ್
ತೊಳ್[4]ಗುವ ಧೂಳಿಸಂಜೆಯೆನೆ [5]ಸಾ[5]ರ್ದಿರೆ [6]ಪಿಂಬಗಲೆಂಬ[6] ಲಗ್ನಿಗಂ
[7]ಸುೞಿಸಿದ[7] ಬಟ್ಟಲಂತೆ ಮುೞುಗಿತ್ತಪರಾಬ್ಧಿಯೊಳರ್ಕಮಂಡಲಂ ೧೬

ಎನಗಂ ಭೂಪತಿಗಂ ಸಮಾನಮೆ ಕರವ್ಯಾಪ್ತಾಖಿಲಾಶತ್ವಮ
ತ್ಯನುರಕ್ತಪ್ರಕೃತಿತ್ವಮಭ್ಯುದಯವತ್ವಂ ಚಕ್ರಭೃತ್ವಂ ದಲೆಂ
ದಿನನುದ್ಯಾನಪಯೋವಿನೋದಸದೃಶತ್ವಕ್ಕಂ ಮನಂದಂದವೋಲ್
ವನಮಾಲಾಕುಲತೀರಮಪ್ಪಪರಪಾರಾವಾರಮಂ ಪೊರ್ದಿದಂ ೧೭

(ಚಂದ್ರಪ್ರಭಪುರಾಣಂ ೮-೨)

ಪ್ರತ್ಯಗ್ಭೂಧರವಾತ್ಮಾ
ಧಿತ್ಯಕದೊಳ್ ತಳೆದುದಸ್ತಗತಿಯಿಂ ಬೀೞ್ವಾ
ದಿತ್ಯನನೆಂದುಮದಾರ್ಗಂ
ನಿತ್ಯಪರಾರ್ಥೈಕವೃತ್ತನಕ್ಕುಂ ಗ್ರಾಹ್ಯಂ ೧೮

(ಚಂದ್ರಪ್ರಭಪುರಾಣಂ ೮-೩)

ಅಚ್ಚದಿರೆ ಕೞಲೆ ಕೀಲ್ ನಡು
ವುರ್ಚೆ ನೊಗಂ ಮುಱಿಯೆ ಸುರುಳೆ ಸುತಂ ನಸು ಕಣ್
ಮುಚ್ಚೆ ಫಣಿ ಕುದುರೆ ಬೞಲಲ್
ಪಶ್ಚಿಮಮಿನಿಸಿನಿಸು ಜಾಱ ದಿನಕರನಿೞದಂ ೧೯

---

1ಮಸ್ತ (ಖಬ) 2ಲಾಂಬುಜಾ (ಕ) 3ತಳಿ (ಖಬ) 4ಪ್ರಯೋಗಙು (ಅ) 5ಪೊ (ಅ)6 ಪಿಂಗಲಿಯೆಂಬ (ಖಬ) 7ಘೞಗೆಯ (ಅ) 8ರ್ಗಮ (ಖಬ) 9 ಮ್ಯಂ (ಖಬ)

ಕವಿದುವು ಧೇನು ಮುಂಚೆ ತುಱುಗಳ್ ಪೊಲದತ್ತಣಿನೂರ್ಗೆ ಬಾ[1]ನ[1]ಲಾ
ದುವು ಪಡುವಣ್ಗೆ ಪಾಱಿದುವು ಗೂಡಿನ ಸಾರ್ಕೆಗೆ ಪಕ್ಕಿ ಕೊಂಬುಗೊಂ
ಡುವು ಮೃಗಮೂರ ಪೊರ್ದುಗೆಯ ಬಟ್ಟೆಗೆ ಮೇಪಿನ ಕಾಪಿನಿಂ ಮರ
ಳ್ದುವು ದಿನನಾಯಕಂ ವರುಣ ದಿಙ್ನಗಮಂ ಮುಱಿಗೊಳ್ವ ಕಾಲದೊಳ್ ೨೦

ಅಪರಾಶಾದ್ರಿಯ ಮೇಲೆ ಗೈರಿಕಶಿಲಾಶಲ್ಕಂಗಳಂ ನುರ್ಗುತುಂ
ತಪನಸ್ಯಂದನ ಚಕ್ರಮಾಕ್ರಮಿಸಿ ಪೋದಂತಾ ರಜಂ ವಾಜಿರಾ
ಜಿಪದಾಘಾತದಿನುರ್ಬಿ ಪರ್ಬಿದುದು ತದ್ದಕ್ಚಕ್ರಮಂ ಬೇಱಿ ಕೆಂ
ಪು ಪೊದ[2]ಬ್ವಿಂ[2]ತು ನಿಮಿತ್ತಮೇನಿಸಿ ಸಂಧ್ಯಾರಾಗಮಾ ವೇಳೆಯೊಳ್ ೨೧

ಪರಿಣತದಿನಶಿರದಂ[4]ದದ[4]
ಖರಕಿರಣಮ ಕಾಲಚಕ್ರಹತಿಯಿಂ ಕೆಡೆಯಲ್
ಸುರಿದು ಪರೆದರುಣಜಲದಂ
ತಿರೆ ಪಸರಿಸುತಿರ್ದುದಪರಸಂಧ್ಯಾರಾಗಂ ೨೨

(ಲೀಲಾವತಿ ೧೦-೧೯)

ಅಂಬರಮಣಿ [5]ಮುಱುಗಿದನಿಂ
ತಂಬುವಿನಂ[5] ಹಿಮಕರಾಂಶುಗಳ್ ಪತ್ತು[6]ಗುಮೆಂ[6]
ದಂಬರ ಹರಿ[7]ಪೊದೆದಾ[7] ಪೀ
ತಾಂಬರ[8] ಮೆನಿಸಿರ್ದುದಪರ[8] ಸಂಧ್ಯಾರಾಗಂ ೨೩

(ಲೀಲಾವತಿ ೧೦-೨೦)

ಅಂಬರವಧು ಮಿತ್ರವಿಯೋ
ಗಂ ಬೇಗದೊಳಾ[9]ಗೆ ಮನದೊಳುಮ್ಮಳದಿಂ ಕಾ
ಶಾಂ[9]ಬರಮಂ ಪೊದೆದುದು ತಾ
ನೆಂಬಿನೆಗಂ ಸಂಜೆಗೆಂಪಿನಿಂ ರಂಜಿಸುಗುಂ ೨೪

(ಕುಸುಮಾವಳಿ ೪-೨೭)

ಬಳಸಿದುದರ್ಕವಾಜಿ ಖುರಘಟ್ಟಿತಮಾದಪರಾದ್ರಿಯಿಂದಮು
ಚಳಿಸಿದ ಧಾತುರೇಣುವೆನೆ ಚಕ್ರಯುಗಂಗಳಗಲ್ಕೆಗಿಚ್ಚು ಪಾಂ

---

1 ವ (ಕಖಬ) (ಕವಿಚರಿತ್ರೆ-೧೩೩೬) 2 ಳ್ದಂ (ಖಬ) 3 ಗ (ಕ) 4 ತಿರೆ (ಅ) 5 ಮಲಗಿದನಿಕರಂಬುವಿನಂ (ಕ) ಮು★ಗಿದನಿಂಶುಂಬುವಿನ (ಅ) 6 ವುವೆಂ (ಅಕ) 7 ಪೊಡೆಯಲ್ (ಅಕ) 8 ತೆಗೆದನೆನಿಸದೆ (ಅ) 9 ಗಲುಬ್ಬೆಗದೊಳಂ ಕಾಷಾಯಾಂ (ಅ)

ಸುಳಿಯರೆ ರಾದೇಱಿ ದೆಸೆವೆಣ್ಗಳ ರತ್ನವಿಭೂಷಣಾಂಶುವು
ತ್ಪಳಿನಿಯ ಕುಂಕುಮೋದಕದ ಸಿಂಪಿಣಿ ಸಂಜೆಯ ಕೆಂಪು ಲೋಕಮಂ ೨೫

(ಚಂದ್ರಪ್ರಭಪುರಾಣಂ ೮-೪)

ಒಂದದ ಪಗಲಿರುಳೆರಡುಱ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ
ಸಂದಿಸಿ ಪೊಲಿದವೊಲೆಸೆದುದು
ಮಂದೈಸಿದ ಸಂಜೆಗೆಂಪು ಪಡುವಣ ದೆಸೆಯೊಳ್* ೨೬

(ಜಗನ್ನಾಥವಿಜಯಂ ೧೬-೯೫)

ಜಲರುಹಮಿತ್ರನೊಳ್ ನೆರೆವ ಸಂಜೆಯ ನಿರ್ಭರಾಕಂಠನಾದಮಂ
ನಲವಿನೊಳೆಯ್ದೆ ಕಲ್ತು ಪರಿಮಿಕ್ಕಿರೆ ಪಕ್ಕೆಗೆ ಸಾರ್ವ ಪಕ್ಕಿಗಳ್
ಚಿಲಿವಿಲಿವಿಚ್ಚುವಿಚ್ಚುಚಿಲಿಚಿಲ್ಪಿಲಿ ಕರ್ಕುಕಹುರ್ಕು ಬಾರ್ಕುಳಿ
ಘುಲಘುಲಲೆಂದದೇನುಲಿಯುತಿರ್ದುದೊ ನೀಳ್ದ ಮಹೀರುಹಂಗಳೊಳ್ ೨೭

---

★ ಈ ಪದ್ಯವಾದ ಮೇಲೆ (ಖಬ) ಪ್ರತಿಗಳಲ್ಲಿ ಮುಂದಿನ ೫ ಪದ್ಯಗಳು ಹೆಚ್ಚಾಗಿವೆ :
ದಿನಪಂ ತನಹ್ನನಗಲ್ದು ಪೋಗೆ ಹರಿದಿಕ್ಕಾಂತಾನನಂ ಕಂದಿದ
ತ್ತೆನೆ ಪರ್ವುರ್ವಿದುದಾತನೊಳ್ ನೆರೆ ರಾಗಂ ಪಶ್ಚಿಮಾಶಾವಿಳಾ
ಸಿನಿಗಾದತ್ತೆನೆ ಸಂಜೆ ರಂಜಿಸಿದುದೇನಾಶ್ಚರ್ಯಮಂ ತಾಳ್ದರಾ
ತಿನಿಯೇಂ ತನ್ನನಗಲ್ದೊಡಂ ನೆರೆದೊಡಂ ನೀರಾಗಮಂ ರಾಗಮಂ ೧

ತಡೆಯದೆ ದಿನಪತ ದಿಕ್ಸತಿ
ಯೊಡಗೂಡಲ್ ಪೋದ ತೆಱನನಱಿದರುಣಂ ಕೆಂ
ಪಿಡಿದಿರ್ದ ಕಾಮಡಪಟಮಂ
ಪಿಡಿದಿರ್ದವೊಲಪರದಿಶೆಯ ಸಂಧ್ಯಾರಾಗಂ ೨

ಪವಳದ ಬಳ್ಳಿಯ ತುಱುಗಲ್
ಪವಣಿಲ್ಲದೆ ತಳ್ತು ಬೆಳೆದು ಕುಡಿಯಿಟ್ಟಟಪರಾ
ರ್ಣವದೊಳೆ ಬೆಳದಪವೆಳಿಂದೆಂ
ಬವೊಲೆಸೆದತ್ತಪರದೆಸೆಯ ಸಂಧ್ಯಾರಾಗಂ ೩

ಇನನಪರಾಂಗನೆಯಂ ಪಿಡಿ
ದನುಭವಿಸಲ್ ಪೋದ ತೆಱ ದಿನಡಗಿದನಾ ಕಾ
ಮಿನಿಯನುರಾಗಂ ಪರ್ಬಿ
ತ್ತೆನಲೆಸೆದತ್ತಪರದೆಸೆಯ ಸಂಧ್ಯಾರಾಗಂ ೪

ಇನನಸ್ತಮಿಸಲ್ ದಿವಸಾಂ
ಗನೆಸಹಗಮನವನೊಡರ್ಚಲೊಟ್ಟಿದ ಪೆರ್ಗಿ
ಚ್ಚಿನ ಪರ್ಬಿದರುಣರುಚಿಯೆಂ
ಬಿನಮೆಸೆದತ್ತಪರದೆಸೆಯ ಸಂಧ್ಯಾರಾಗಂ

ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗ
ಲ್ಚುವ ದಿವಸಾವಸಾನಸಮಯಕ್ಕೆ ಕನಲ್ದುರಿದೇೞ್ವ ಸಂಜೆಯೊ
ತ್ತುವ ತಮವತ್ತಮಿತ್ತಲಳುರ್ದತ್ತಲೆ ಪೊರ್ದಿದ [1]ಹೊಳ್ಳಲೊಳ್[1] ಮಿಡುಂ
ಕುವ ಬೆದೆವಾವಿನಂತಗಲಲಾಱದೆೞಲ್ದವು ಜಕ್ಕವಕ್ಕಿಗಳ್ ೨೮

(ಅನಂತನಾಥಪುರಾಣಂ ೭-೭೦)

ಸುಯ್ದು[3]ಟಿ[3]ಲೆರಥಾಂಗಂ ಕ
ನ್ನೆಯ್ದಿಲನಲಗೆಂದು ಪಾಯಲೊಡರಿಸಿದುದು ಚೆ
ನ್ನೆಯ್ದಿಲು[4]ರಿ[4]ಯೆಂದು ಪುಗಲನು
ಗೆಯ್ದುದು ಪೆಣ್ಬಕ್ಕಿ ವಿಪುಳ ವಿರಹವ್ಯಥೆಯಿಂ ೨೯

ಬಿಸುಸುಯ್ದುತ್ತೋಪನೊಳ್ ಪೋದಡೆ ಕಳವಳದಿಂ ಕಂಜಕಿಂಜಲ್ಕದೊಳ್ ಭಾ
ವಿಸಿ ಪೊಕ್ಕುಂ ಪ[5]ಜ್ಜೆ[5]ಯಂ ತಾವರೆಯೆಲೆವೞೆಯೊಳ್ ನೋಡಿ ಶೈವಾಳದೊಳ್ ಸೋ
[6]ದಿ[6]ಸಿ ನೀಲಾಂಭೋಜದೊಳ್ ನಿಟ್ಟಿಸಿ ತೆರೆಪೊರೆಯೊಳ್ ಪೊಕ್ಕು ಸುತ್ತುಂ ತೊೞಲ್ದಾ
[7]ಲಿ[7]ಸಿ ನೀರ್ವೊ[8]ಯ್ಲಿಂ[8] ಬೞಲ್ದತ್ತಸಮಶರಸಮುತ್ಕೀಲಿತಾಂಗಂ ರಥಾಂಗಂ ೩೦

ಒೞಿದುಗುವ ಬಾಷ್ಪವಾರಿ[9]ಯೊ
ಳೆ[9]ೞಂಕೆಗಳ್ ನಾಂದು ಮಗುೞ್ ವಿರಹಾನಳನಿಂ
ನೆೞ್ ಬೞ[10]ವಾಗಿರೆ[10] ಪಡುನೇ
ಸೞೊ[11]ಳಳುರ್ದು[11]ವಗಲ್ದು ಚಕ್ರವಾಕದ್ವಂದ್ವ ೩೧

(ಚಂದ್ರಪ್ರಭಪುರಾಣಂ ೮-೬)

ಅರಮೆ ಮೞಿ ಪತಂಗಂಗಾಗೆ ತಚ್ಛೈಲಶೃಂಗಂ
ವಿರಹಪರವಶಾಂಗಂ ತ್ಯಕ್ತಜಾಯಾನುಷಂಗಂ
ಸ್ಮರವಿಶಿಖನಿಷಂಗಂ ಸಾಶ್ರುಪಾತಾಂತರಂಗಂ
ದರವಿಚಳದಪಾಂಗಂ ಮ್ಲಾನಮಾಯ್ತಾರಥಾಂಗಂ ೩೨

(ಚಂದ್ರಪ್ರಭಪುರಾಣಂ ೮-೫)

ತೆರೆ[12]ಯ ಸೆಳೆ[12] ಮಂಚದೊಳ್ ಬಿ
ತ್ತರಿಸಿದ ಗಳಿತಾಬ್ಜದಳದ ನುಣ್ಪಸೆಯೊಳ್ ಬೆ

1 ಪೊೞಲೊಳ್ (ಅ) 2 ಬೆಳುಗಾವಿ (ಅ) 3 ಗ (ಕ) 4 ಲಿ (ಕ) 5 ಚ್ಚೆ (ಕ) 6 ವಿ (ಕಖಬ) 7 ರಿ (ಕ) 8 ಯ್ದಂ (ಕ) 9 ಯಿನೆ (ಅ) 10 ವರಾಗೆ (ಖಬ) 11 ಳಿರ್ದು (ಅ) 12 ಸೆಳೆಯೆ (ಕ)

ಳ್ನೊರೆಯ ತೆರೆಸುತ್ತಿನೊಳ್ ಪ್ರಿಯೆ
[1]ನೆರೆದೊಳ್ಪಂ[1] ಬಯಸಿ ಕೋಕನಾಯ್ತು ಸಶೋಕಂ ೩೩

ಜಲಜದಳಪೀಠದೊಳ್ ನ
ಲ್ಲಳ ನುಣ್ಗಱಿ ಸೋಂಕೆ ಸೋಂಕಿ ಕುಳ್ಳಿರ್ದಳಿನೀ
ಕಳಗಿತರವಮನಾಲಿಪ
ವಿಳಾಸಮಂ ನೆನೆದೊನಲ್ದುದೊಂದು ರಥಾಂಗಂ ೩೪

(ಚಂದ್ರಪ್ರಭಪುರಾಣಂ ೮-೭)

ಇನಿಯಳ್ ಪೊಣರಱಿದೊಡದಂ
ನೆನೆನೆನೆದುಂ ಸುಯ್ದುಸುಯ್ದಱಲ್ದಱ್ತಿ
ಬ್ಜಿನಿಯಬ್ಜಿನಿದಪ್ಪದೆ ನೋ
ಡಿ ನೋಡಿ ಜಾನಿಸಿದುದತುಳಶೋಕಂ ಕೋಕಂ ೩೫

(ಜಗನ್ನಾಥವಿಜಯಂ ೧೬-೯೭)

ಇದು ಮರ್ತ್ತಾಣೇ[2]ಶೆಯೆ[2]ನ್ನೊಳ್ ನೆರೆದ ಪುಳಿನಮಾಯಿರ್ದುದಾ ಕಾಂತೆಮೆಲ್ಲೊ
ಲ್ಲದಮಾರ್ಣಾಳಾ[4]ರ್ಥಮಿಾ[4] ತೋರ್ಪುದೆ ಪುಸಿಮುಳಿಸಿಂ ಕಾಡಲೆಂದಾಕೆ ಪೊಕ್ಕಿ
[5]ರ್ದುದಿದಾ[5] ನೀರೇಜಪರ್ಣೋತ್ಕರಮೆನುತೆ ಮೊದಲ್ಗೊಂಡುದಂಭೋಜಸದ್ಮಾಂ
ತದೊಳುದ್ಯತ್ಕಂತು [7]ಚೇತಂ[7] ತೊಱಲಲವಿರತಂ ಚಕ್ರವಾಕಂ ವರಾಕಂ ೩೬

(ಚಂದ್ರಪ್ರಭಪುರಾಣಂ ೮-೧೦)

ನಲ್ಲರಗಲ್ಕೆಯಿಲ್ಲದೆಡೆಯಸ್ತಮಯಕ್ಕೆ ದಿನಾಧಿನಾಯಕಂ
ಸಲ್ಲದ ತಾಣಮಂಗಜಶರಾಹತಿ ಪೊರ್ದದ ದೇಶಮುಳ್ಳೊಡಂ
ತಲ್ಲಿಯೆ ಮಾೞ್ಕೆ ಮಜ್ಜನಮಂ ಬಿದಿಯೆಂದು ರಥಾಂಗಕಾಂತೆ ಹೃ
ದ್ವಲ್ಲಭವಿಪ್ರಯುಕ್ತ ಬಗೆಗೆಟ್ಟು ನೆಱಲ್ದುದು ಪದ್ಮಪತ್ರದೊಳ್ ೩೭

(ಚಂದ್ರಪ್ರಭಪುರಾಣಂ ೮-೭)

ಚಂಡಮರೀಚಿಗಸ್ತಮಯಮಿಲ್ಲದುದೊಂದೆಡೆ [8]ನಿಮ್ಮ[8] ಕೇಳ್ದುದುಂ
ಕಂಡುದುಮುಳ್ಳೊಡಿಂ ಬೆಸಸಿಮಾಮಿರದಲ್ಲಿಗೆ ಪೋಪೆವೆಂದು ಮೆ
ಯ್ಗೊಂಡೊಲವಿಂದಗಲ್ಕೆಗಣಮಾಱದೆ ಪಕ್ಕಿಗಳೆಲ್ಲ [9]ಮೇಂ[9] ಮರು
ಳ್ಗೊಂಡವೊಲುಳ್ದು ಕೂಡೆ ಬೆಸಗೊಂಡು ಬಱಲ್ದುವು ಜಕ್ಕವಕ್ಕಿಗಳ್ ೩೮

(ಪಂಪಭಾರತಂ ೪-೪೮)

---

1ಗಿರಿದೊಳ್ಪನೆ (ಅ) 2ಶನೆ (ಅ)3 ಲ್ದೊ (ಅ) 4ರ್ತದಿಂ (ಖಬ) 5ರ್ದದಳಂ (ಖಬ) 6ಪ (ಕ) 7ಚೆಂದಂ (ಖ) ಚಿಂತಂ (ಬ) 8ನೀವು (ಕ) 9ಮಂ (ಅ) ಮುಂ(ಕ)

ನೋಡಿ ಕನಲ್ದೊನಲ್ದು ಪಡುನೇಸಱಿನುಣ್ಮುವ ಕಣ್ಣನೀ[1]ರೋಳೋ
ಲಾ[1]ಡುವ ಜಕ್ಕವಕ್ಕಿ ಬಗೆಗೆಟ್ಟು ವಿಯೋಗವಿಷಾದ [2]ವೇಗದಿಂ[2]
ಪಾಡಱಿದೆಂತೊ ಪಾಱಿದಪುವಾನಱಿದೆಂ ನಿಡುಸುಯ್ಯ ಗಾಳೊ ಕೊಂ
ಡೋಡಿದುವೊಂದನೊಂದೆಸೆಗದಲ್ಲದೊ[3]ಡೇಂಗಡ[3] ಪಾಱಲಾರ್ಪುವೇ ೩೯

(ಮಲ್ಲಿನಾಥಪುರಾಣಂ ೭-೫)

ಕೂಡಿದೆವಿಲ್ಲಿ ಕೂಡಿ ನಲಿದೋಕುಳಿಯಾಡಿದೆವಿಲ್ಲಿ ಸಂಗಡಂ
ಪಾಡಿದೆವಿಲ್ಲಿ ಪಂಕಜದ ಕೋಮಳಕೋಶದ ಬೀಜರಾಜಿಯಂ
ತೋಡಿದೆವಿಲ್ಲಿ ನೀಡಿ ಕುಟುಕಂ ಮನದಕ್ಕಱೊಳೀಗಳಿಕ್ಕಿ ಬಾ
ಯ್ಗೊಡಿದೆವೆಂದು ತಮ್ಮಿನಿಯರಂ ನೆನೆದೞ್ತುವು ಜಕ್ಕವಕ್ಕಿಗಳ್ ೪೦

ಅಱಸಿ ಸುೞಿಸುೞಿದು ನಲ್ಲಳ
ನೆಱಂಕೆಗೊಟ್ಟೊಱಲಿಯೊಱಲಿ ದನಿಗೆಟ್ಟೞುತುಂ
ತೊಱೆತರ್ಪ ಕಣ್ಣೀರ್ವರ
ಲೊಱಗಿದುದೞ್ತೊಂದು ಮೂರ್ಛೆವೋಗಿ ರಥಾಂಗಂ ೪೧

ಎರಲಲೆಪಿಂದೆಸೞ್ ಮಿಸುಪನೆಯ್ದಿಲನೋಪಳಗೆತ್ತು ಗೆಂಟಱೊಳ್
ಕರೆದುದು ಬಾರಳಾಂ ಕರೆದೊಡಂ ಪ್ರಿಯೆಯೆಂದು ಕನಲ್ದು ಚಂಚುವಂ
ಮುರಿದುದು [4]ಬಂದ್[4]ಡಂಗಿದಳೆ ಗೆತ್ತು ಬಿದಿರ್ಚಿ ದಳಂಗಳಂ ತೆಱಂ
ದಿರಿದುದು ಜಕ್ಕವಕ್ಕಿಮಿಗೆ ಮೂರ್ಛೆಗೆ ಸಂದುದು ಕಾಣದೋಪಳಂ ೪೨

(ಅನಂತನಾಥಪುರಾಣಂ ೭-೭೧)

ಕಡುಬಿಸುಪನಹಿಮಕರನಿವ
ಱೊಡಲೊಳ್ [5]ಮಡಗಿಟ್ಟು[5] ಪೋದನೆನೆ ಮಱುಕಂ ನೂ
ರ್ಮಡಿಸಿದುದಗಲ್ಕೆಗಾಱದೆ
ಮಿಡುಮಿಡುಮಿಡುಕಿದವು ಜಕ್ಕವಕ್ಕಿಯ ಪೊಣರ್ಗಳ್ ೪೩

ಪುಳಿನತಳಂಗಳೊಳ್ [6]ಸುೞಿದು[6] ನುಣ್ಮಳಲಂ ಜಲಶೀಕರಂಗಳಂ
ತಳಿದು ಕೞಲ್ದ ಪದ್ಮದಳಸಂಕುಳದಿಂದೆ ಸೞ್ವಾಸನೊತ್ತಿ ಪೂ
ಗೊಳದೊಳಗಲ್ದ ಕೋಕವನಿತಾವ್ಯಥೆಗಂ ಶಿಶಿರೋಪಚಾರದೊಳ್
ಕೆಳದಿಯರಾದು[7]ವೋ[7] ತಳರ್ವ ತಣ್ಣೆಲರಿಂ ತರಳೋರ್ಮಿಮಾಲೆಗಳ್ ೪೪

(ಅನಂಥನಾಥಪುರಾಣಂ ೭-೬೧)

1ರೊಳಲ್ಲಾ (ಕ ಖ ಬ) 2ಬೇದದಿಂ (ಕ ಖ ಬ) 3ಡೀಗಳೆ (ಖ ಬ) 4ಪಿಂ (ಖ ಬ) 5ಮರವಿಟ್ಟು (ಖ ಬ) 6ಸೆಳೆವ (ಅ) 7ವಾ (ಅ)

ಇನನಸ್ತಮಿತ್ರಿಯನಾತನೊಳ್ ತವದ ಪೆರ್ಚಂ ನಿಚ್ಚಮಿಚ್ಚೈಪಕೋ
ಕನಿಕಾಯಕ್ಕಿನಿತಾಯ್ತು ಶೋಕಮವನಸ್ತಪ್ರಾಪ್ತಿಯಂ ಸಾರ್ವು[1]ದ
ಕ್ಕಿ[1]ನಿತಾಯ್ತುತ್ಸವಮುತ್ಪಲಕ್ಕೆನುತವಂ ನೋಡಲ್ಕೆ ತಾನಾಱದ
ಬ್ಜಿನಿ ಕಣ್ಮುಚ್ಚುವ ಮಾೞ್ಕೆಯಿಂ ಮುಗಿ[2]ದುವೆ[2]ತ್ತಂ ಪದ್ಮಪತ್ರೋತ್ಕರಂ ೪೫

(ಚಂದ್ರಪ್ರಭಪುರಾಣಂ ೮-೧೧)

ಇದು ಕೋಕಶೋಕಮಂ ನೋ
ಡದ ಕೃಪೆಯಿಂ ಪದ್ಮನಯನಮಂ ಪದ್ಮಿನಿ ಮು
ಚ್ಚಿದಳೆನೆ ಭಾವಕದಿಂದ
ಲ್ಕಲದೆ ಭಾವಕಿ ತೊಱೆದಳಿನನಗಲ್ಕೆಯ ನೋವಂ ೪೬

(ಜಗನ್ನಾಥವಿಜಯಂ ೧೬-೯೮)

ಅಸಮಸಮವೃತ್ತಿಯಂ ಭಾ
ವಿಸುವಂದಲ್ಪತೆಯೆ ನಾಡೆ ಲೇಸೆಂಬವೊಲು
ಲ್ಲಸಿತೋತ್ಪಲಂಗಳೊಳ್ ಮುಗಿ
ದು ಸರೋಜಂ ನೆನೆಯಿಸಿತ್ತು ಚತುರಾಶ್ರಮಮಂ ೪೭

(ಚಂದ್ರಪ್ರಭಪುರಾಣಂ ೮-೧೨)

ಪೊರೆಯದು ಜಾಡ್ಯದೊಳೆನಸುಂ
ಪಿರಿ[4]ದು[4]ಗುಣಂ ಸಿರಿಯುಮುಂಟು ತನಗೆನಿಪಾತಾ
ವರೆ[5]ಗಂ ಪೋದುದು[5] ನಲವೆನೆ
ಧರೆಯೊಳ್ ಕಾಲಮನದಾರೊ ಕಳೆಯಲ್ ಬಲ್ಲರ್ ೪೮

(ಚಂದ್ರಪ್ರಭಪುರಾಣಂ ೮-೧೩)

ಪಿರಿದು ಬಿದಿ ನಿಜ ಜನ್ಮಾ
ಕ[6]ರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ
ದೊರೆಕೊಳಿಸಿದನೆನೆ ಮತ್ತಿತ
ರರೊಳಾತಂ ಮಾೞ್ಪ ಕೃಪೆ ಖಪುಷ್ಪಮದಲ್ತೇ ೪೯

(ಚಂದ್ರಪ್ರಭಪುರಾಣಂ ೮-೧೪)

ಇನನಸ್ತಂಗತನಾ[7]ಗೆಯು[7]ತ್ಪಲಿನಿ ಪೇೞ್ಗುಂ ಲಕ್ಷ್ಮಿಯುಂಟೆಂಬುದ
ರ್ಕನಗಿನ್ನಪ್ಪುದು ರಾಜಬಾಧೆ ಬೞಿಕಂಲೇಸಲ್ತು ತಾನೆನ್ನ ಜೀ

---

1 ದುಂ ಇ (ಅ) 2 ದುದೆ (ಅ) 3 ರಕ್ರ (ಅ) 4 ಯ (ಖ ಬ) 5 ಗಮುರೆ ಯಾಯ್ತು (ಅ) ಗದರೆವೋಯ್ತು (ಕ) 6 ನ್ಮಾಂತ (ಕಖಬ) 7 ದನು (ಖಬ) 8 ಗಂತಪ್ಪದು (ಅ)

ವನಕೆಂದುಬ್ಬೆಗದಿಂದೆ ನಂಜುರುಳಿಯಂ [1]ಪೋ[1] ನುಂಗಿದಳ್ ಪಿಂಗದ
ಬ್ಜಿನಿಯೆಂಬಂತೆವೊಲಾಯ್ತು ಕುಟ್ಮಳಿತಕಂಜಾತೋದರೇಂದಿಂದಿರಂ ೫೦

(ಚಂದ್ರಪ್ರಭಪುರಾಣಂ ೮-೧೫)

ಎನಗಾರಿರ್ದಪ[3]ರೋ[3] ರಥಾಂಗಮಿಥುನಕ್ಕೆಂತೊಲ್ಲ[4]ದೀ[4] ನೀಲಪ
ದ್ಮಿನಿಯೆನ್ನಂ ನಗುವಂತು ಮಾಡಿದೆ ಧರಿತ್ರೀನೇತ್ರ [5]ನೊಂದೆನ್ನ[5] ಕೇ
ಡನದೇ[6]ನೆಂ[6]ದಪೆಯೆಂದು ಸಂಕುಚಿತವಕ್ತ್ರಾಸಕ್ತಭೃಂಗೀಕಲ
ಸ್ವನದಿಂ ಕೂಗಿಡುವಂತಿರಾಯ್ತು ದಿನಪಂಗಂಭೋಜಿನೀಕುಟ್ಮಲಂ ೫೧

(ಅನಂತನಾಥಪುರಾಣಂ ೭-೬೮)

ಬಿಸರುಹಮಿತ್ರನೆಂದೆನಿಸಿದೆಮ್ಮಿನ [7]ನೋವದೆ[7] ರಾಜಬಾಧೆಗೊ
ಪ್ಪಿಸಿ ಪೋಸಾರ್ದನೋಲಗಿಪ ಭೃಂಗ[8]ಕುಲಾ[8]ವಳಿ ಬಿಟ್ಟುಪೋಯ್ತು ತ
ಳ್ತೆಸೆವ ವಿಕಾಸಲಕ್ಷ್ಮಿ ಪಗೆಯಂ ನೆಱೆ ಪೊರ್ದಿ[9]ದಳೇ[9]ವೆನೆಂತು ಜಿ
ವಿಸು[10]ವೆನೆ[10] ನುತ್ತೆ ಮೂರ್ಛಿಸುವವೋಲ್ ಮುಗಿದತ್ತರವಿಂದಸಂಕುಳಂ ೫೨

(ಕುಸುಮಾವಳಿ ೪-೧೯)

ಆ ಸರಸೀಜಬಾಂಧವನ ಪಿಂಬಡಿನೊಳ್ ಕಡುವಿನ್ನನಾದವಿಂ
ತೀ ಸರಸೀರುಹಂಗಳವನೀ ಪದದೊಳ್ ಬಿಸುಟೆಂತು ಪೋಪೆವೆಂ
ಬೀ ಸಮಕಟ್ಟಿನೊಳ್ ನೆಲಸಿದಂ [11]ದದಿನಿರ್ದುವು[11] ಷಟ್ಪದಂಗಳು
ತ್ಕೇಸರಕೋಟಿಸಂಕಟಕುಶೇಶಯಕೋಶಕುಟೀರಕಂಗಳೊಳ್ ೫೩

(ಪಂಪಭಾರತಂ ೪-೪೭)

ರಸ[12]ಗೀತಾ[12]ತೋದ್ಯನೃತ್ಯಾನುಗದೊಳೆ ಕಹಳಾಶಂಖಭೇರೀಮೃದಂಗ
ಪ್ರಸರಂ ಮೇಳಾಪ[13]ದೊಳ್[13] ಘೂರ್ಣಿ[14]ಪ[14]ಮಣಿಶಿಖರಾಗಾರಪಾರಾವತಂಗ
ಳ್ಗಸೊತೋದ್ಯದ್ಧೂ[15]ಪ[15] ಧೂಮಚ್ಛವಿಗ[16]ಳ್[16]ರವಮಂ ವಲ್ಲಭಾ[17]ಲೋಭ[17]ದಿಂಪು
ಟ್ಟಿಸೆ[18] ದೇವೋತ್ತಾ[18] ಲಯಂಗಳ್ಗೆ ಸೆದುದಸದಳಂ ಧೂ[19]ಪ[19]ವೇಳಾವಿಳಾಸಂಋಳ

(ಅನಂತನಾಥಪುರಾಣಂ ೭-೬೫)

ಗಱಿಯಿಸುವ ತಮಮಂ ಮೂಡಲ್
ಪೆಱಗ[20]ಟ್ಟಿದ[20] ಸಂಜೆಗೆಂಪು ಪಡುವಲ್ ಕೈಕೊಂ

---

1ಪೊಂ (ಕಖಬ) 2ಪೆಱದ (ಅ) 3ರಿ (ಅಖಬ) 4ದಲ್ (ಅ) 5ನೋಡೆನ್ನ (ಅ) ನೆಂದನ್ನ (ಖಬ) 6ವೋ (ಅಖಬ) 7ನೀಗಳೆ (ಅ) 8ಬಟೌ (ಅ) 9 ದುದೇ (ಅ) 10ವುದೆ (ಅ) 11ದಂತೆಱಗಿರ್ದವು (ಅ) 12ಗಿತ್ತಾ (ಕ) 13ಕಂ (ಅ) 14ಸೆ (ಅ) ಸಿ (ಕ) 15ತ (ಕಖಬ) 16ಳ (ಖಬ) 17ರೋಚ (ಅ) 18ಜೈನೇಂದ್ರಾ (ಅ) 19ಮ (ಅ) 20ಟ್ಟುವ (ಅ)

ಡೞಲೆ ಧರೆಗರ್ಧನಾರಿಯ
ತೞಿವಿಡಿದಂತಾಯ್ತು ಗಗನಮಂಡಲಮಿನಿಸಂ ೫೫

(ಅನಂತನಾಥಪುರಾಣಂ ೭-೭೨)

ಅಂಗಂಗಳ್ ನಸು[1]ದೋೞಿ[1]ದಿ
ಗಂಗನೆಯರ ಮೇಲೆ ಕವಿದ [2]ಕಾ[2]ಟ್ಗಿತ್ತಲೆ ಚೆ
ಲ್ವಿಂಗುಟ್ವ ಕರಿಯ ಕಾಗಿನ
ಭಂಗಿಯನನುಕರಿಸುತಿರ್ದುವಂತಾ ಕ್ಷಣದೊಳ್ ೫೬

(ಲೀಲಾವತಿ ೧೦-೨೬)

ದಿನನಾಥಂ ಪೞಿಂಗೆ ಪೆತ್ತು ತೇೞಪಂ ಮೆಯ್ವೆರ್ಚೆ ರಾಗಂ ನಿಶಾಂ
ಗನೆಯಿಂ ಮು[3]ನ್ನ[3] ಮೃಗಾಂಕನೊಳ್ ನೆರೆಯಲೆಂದಾಶಾವಧೂ[4]ದೂತಿ[4]ವ
ರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲಚೇಲಾವಕುಂ
ಠನಮಂ ತಾನೆನೆ ದಟ್ಟಮಾಗಿರೆ ತಮಂ [5]ಪರ್ಬಿತ್ತು[5] ದಿಕ್ಪ್ರಾಂತಮಂ ೫೭

(ಅನಂತನಾತಪುರಾಣಂ ೭-೭೩)

ಇನನುೞಿದಪರದಿಶಾಕಾ
ಮಿನಿಯೊಳ್ ಕೂಡಿದೊಡೆ ನೋಡಲಾೞದೆ ಪೂರ್ವಾಂ
ಗನೆ ಮುಚ್ಚಿದಕ್ಷಿಪಕ್ಷ್ಮದ
ತನಿಗರ್ಪೆನಿಸಿದುದು ಕೊನರ್ವ ಕೞ್ತಲೆ ನಭದೊಳ್ ೫೮

(ಅನಂತನಾಥಪುರಾಣಂ ೩-೬೭)

ಪ್ರಾಚೀಮುಖಮೃ[7]ಗ[7]ಮದಮು
ರ್ವೀಚಳದಳಕಂ ನಭಸ್ಥಳೀ[8]ನೀಳ್[8]ವಿಭೂ
ಷೋಚಿತ ಮರೀಚಿ [9]ಪಸರಿಸೆ[9]
ಸೂಚೀನಿರ್ಭೇದ್ಯಮಾದುದಂದಿನ ತಿಮಿರಂ ೫೯

(ಲೀಲಾವತಿ ೬-೧೦೮)

ದಿವಿಜೇಂದ್ರೇಭ[10]ಪ್ರಧಾನಂ[10]ಬಹಳದಹನಧೂಮಂ ಯಮೋಚ್ಚೈರ್ಲುಲಾಯ
ಚ್ಛವಿಕಂ ಕ್ರವ್ಯಾದಕಾಯದ್ಯುತಿ ವರುಣಗೃಹಸ್ಥಾ[11]ಸ್ನು[11] ಕೃಷ್ಣಪ್ರಕಾಶಂ
[12]ಪ[12]ವನೋದ್ಯತ್ಕೃಷ್ಣಸಾರಪ್ರಭೆ ಧನದಪುರೀನೀಲ[13]ಶಾ[13]ಲಾಂಶುಜಾಲಂ
ಭವಕಂಠಚ್ಛಾಯೆ ಪರ್ಬಿತ್ತೆನೆ [14]ದಶದಿಶೆ[14] ಯಂ ಮರ್ಬು ಪರ್ಬಿತ್ತುಗುರ್ಬಿಂ ೬೦

(ಲೀಲಾವತಿ ೧೦-೨೭)

---

1 ದೞಿಯೆ (ಅ) 2 ತೆ (ಅ) 3 ನ್ನೆ (ಅ) 4 ದೌತ್ಯ (ಅ) 5 ತಳ್ತತ್ತು (ಅ) 6 ಗ್ಮಾ (ಕ) 7 ದು (ಖಬ) 8 ನಿಳಯ (ಅ) 9 ಬರೆವರೆ (ಅ) 10 ಪ್ರಭೇದಂ (ಅ) 11 ಶ್ಮ (ಖಬ) 12 ಸ (ಕ) 13 ತೈ (ಕ) 14 ದೆಸೆದೆಸೆ (ಅ)

ಮೆಟ್ಟಿದನಿತ್ತೆ ಧಾರಿಣಿ ಚರಾಚರಭೇದ ಸುವಸ್ತು ರೂಪುಗಳ್
ಮುಟ್ಟಿದನಿತ್ತೆ ಬಕ್ಕಬಯಲಾಗಸವೆಂಬರ ಮಾತು ನಿಶ್ಚಯಂ
ಗೆಟ್ಟುದು ತಾನುಮುಂ ತನಗೆ ಸಂಶಯಮೆಂಬಿನಿತೊಂದು ಮೋಹನಂ
ಪುಟ್ಟಿ ಜನಕ್ಕೆ ಗಾಢತರಮಾದುದು ಘೋರತಮಂ ತಮಸ್ತಮಂ ೬೧

ಜಗುನೆಯ ಕರ್ಮಡು ನೆಲನಂ
ದಿಗಿಭದ ಮದವಟ್ಟೆ ದೆಸೆಗಳಂ ರಾಹುಶಿರಂ
ಗಗನಮನೆಡೆಗೊಂಡತ್ತೆನೆ
ಜಗಮಂ ಪರ್ಬಿದುದು ಬಹಳ ತಮಸಂ ತಮಸಂ ೬೨

(ಮಲ್ಲಿನಾಥಪುರಾಣಂ 7-21)

ದೆಸೆಯಿದು ಭೂವಳಯಮಿದಾ
ಗಸಮಿದು ತಾನೆಂಬ ಭೇದಮಿಲ್ಲೆನೆ ತಮ ಮ
ರ್ಬಿಸಿದುದು ಜಗಮಂ ಕೃ[1]ಷ್ಣಂ[1]
ಬಸಿಳೊಳಗಿಟ್ಟಂತೆ ರಜನಿ[2]ಚರ[2]ಭಯದಿಂದಂ ೬೩

(ಲೀಲಾವತಿ ೧೦-೨೯)

ಮಸಿಯಿಂದಂ ಜಗಮೆಲ್ಲಮಂ ದಿತಿಸುತಂ [3]ಮೇಣ್[3] [4]ಪೂಜ್ದಿನೋ[4] ಕಾಳಮೇ
ಘಸಮೂಹಂ ದೆಸೆಯೆಲ್ಲಮಂ [5]ಮುಸುಕಿತೋ[5] ಗಂದೇಭಚರ್ಮಂಗಳಂ
ಪ್ರಸರಂಗೆಯ್ದನೊ ಶಂಭುವೆಂಬ ಬಗೆಯಿಂ [6]ತಳ್ಪೊಯ್ದು ಕರ್ಪೋಳ್[6] [7]ಸೂ
ಚಿಸಲಾರ್ಗಂ ವಶಮಾಗದಂತು ಕವಿಯಿತ್ತು[7]ದ್ದಾಮ ಭೀಮಂ ತಮಂ ೬೪

(ಪಂಪಭಾರತಂ ೪-೪೯)

ಕರಿದತ್ತಾ ತುಂಬಿಗಂ ಕಾರ್ಮುಗಿಲ ಬಳಗಮಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆ ತಾಂ ನೋರ್ಪೊಡೆ ಕಡುಕರಿದಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆಗಂ ಕಜ್ಜಳರುಚಿ ಕರಿದಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆಗಂ ಕಜ್ಜಳರುಚಿಗಮದೇಂ ಕಳ್ರಿನಾಯ್ತೋ ತಮಂಧಂ ೬೪

ಅಮಮ ಮಧುಕರ ಕದಂಬಕ
ಮಮಮಮತಿಸ್ನಿಗ್ಧರಂಜಿತಾಂಜನಪುಂಜೋ

---

1 ಷ್ಣನ (ಕ) 2 ಜರೆ (ಕ) 3 ಮುಂ (ಅ) 4 ಪೂಣ್ದನೊ (ಕ) 5 ಕವಿದುದೊ (ಅ) 6 ತಳ್ಪೊಯ್ಯೆ ತಳ್ಪೊಯ್ದು (ಕ ಖ ಬ) 7 ಪುಂಜಿಸಲಕ್ಕುಂ ಮಳಮಾನಿತುಳ್ಕೆಕವಿದತ್ತು (ಕ) ಪುಂಜಿಸಲಕ್ಕಪ್ಪಟಮಾಗದಂತು ಕವಿಯಿತ್ತು (ಖ ಬ)

ಪಮಮಮಮಸತಿ ಸಮೂಹಾ
ಶ್ರಮಮದೇವೋಗೞ್ವಿನುರ್ಬಿ ಪರ್ಬಿದ ತಮಮಂ ೬೬

ಬಿದಿ ಹರಿನೀಲ[1]ದೊಳ್[1] ಕಡೆದಜಾಂಡಮನಂಜನದೊಳ್ ಪೊರಳ್ಚಿದಂ
ತೊದವಿರೆ ಮರ್ಬು ಸಂದೆ[2]ಯ[2]ದೆ ತಮ್ಮೊಡಲಂ[3]ಬಿಡದಂದು[3] ನೋೞ್ಪರೆಂ
ಬುದನೆನೆ ನೋಡಿ ನಿಟ್ಟಸುವರಾರಿದು ಪರ್ವತಮೆಂಬಿದುರ್ವಿಯೆಂ
ಬಿದು ದೆಸೆಯೆಂಬಿದಭ್ರಪಥಮೆಂಬ ಚರಾಚರವಸ್ತುಭೇದಮಂ ೬೭

(ಮಲ್ಲಿನಾಥಪುರಾಣಂ ೭-೨೨)

ಈ ಮಂದಮಪ್ಪ ಕೞ್ತಲೆ
ಕಾಮಾಂಧಕ ಜನದ ಮನದ ಕರ್ತಲೆಯಿಂದಂ
ಭೀಮಮೆನೆ ಕವಿದು ಕೂಡೆ ತ
ಮೋಮಯಮೆನಿಸಿದುದು ಸಕಲ ಭುವನಾಂತರಮಂ ೬೮

ಜಾರರ ಸಿರಿ ಚೋರರ ಸಿರಿ
ಕ್ರೂರಸರಂದೋಱುತಿರ್ಪ ಗೂಗೆಯ ಸಿರಿ ಮ
ತ್ತಾರ ಸಿರಿ ತಮದ ಸಿರಿ ದೃ
ಕ್ಸಾರತೆಗದು ನಾಡೆ ಗೆಂಟು ಕಷ್ಟನ ಸಿರಿವೋಲ್ ೬೯

ಘೋರಾಂಧಕಾರಮತಿದು
ರ್ವಾರಂ ನೆಲೆವೆರ್ಚೆ ಬಯಲೊಳಂ ಜಾರರ ಸಂ
ಚಾರಕ್ಕೆಡೆಗೊಟ್ಟಿತ್ತಪ
ಕಾರಿಯ ಸಿರಿ ಖಳರನಲ್ಲದೇಂ ತಣಿಪುಗುಮೇ ೭೦

(ಮಲ್ಲಿನಾಥಪುರಾಣಂ ೭-೨೩)

ಪದತಳಮಂ ತಳರ್ಚಲಿನಿಸಿಲ್ಲೆನೆ ಧಾರಿಣಿ ಮಾಯವಾದುದೋ
ವದನಮನುದ್ದವೆತ್ತಲಿನಿಸಿಲ್ಲೆನೆ ವಾರಿದವೀಧಿ ಮೇಲೆ ಬಿ
ೞ್ದುದೊ ತನುವಿಂಗೆ ಸಾರಲಿನಿಸಿಲ್ಲೆನೆ ನಾಲ್ದೆಸೆ[5]ತಾ[5]ಪಿಸಿತ್ತೊ ಪೇ
ರಿಂದು ವಿಪರೀತಮೆಂದು ಸುರುವರ್ ನೆಲೆ ಕರ್ತಲೆ ಪೆತ್ತುದೇರ್ಗೆಯಂ ೭೧

ಕರಿದು ಪಿಕಂ ಪಿಕಕ್ಕೆ ಕರಿದಾ ಭ್ರಮರಂ ಪಿಕದಿಂದೆ ತುಂಬಿಯಿಂ
ಕರಿದೆಸೆವಂಜನಂ ಪರಭೃತಕ್ಕಳಿಗಂಜನಕಿಂದ್ರನೀಲಮುಂ

---

1 ದಿಂ (ಕ) 2 ಗ (ಅ) 3 ತಡವೃತ್ತ (ಕ ಖ ಬ) 4 ರಾ (ಅ) 5 ವ್ಯಾ (ಕ)

ಕರಿದು ಪಿಕಾಳಿಯಿಂದಳಿಯಿನಂಜನದಿಂ ನೆಗೞ್ದಿಂದ್ರನೀಲದಿಂ
ಕರಿದೆನಲುರ್ಬಿ ಪರ್ಬಿದುದಗುರ್ಬಿಸಿ ಸರ್ವದಿಗಂತಮಂ ತಮಂ ೭೨

ಹರಬರ್ಹಿಗಣಗಳಬ್ಜೋ
ದರಶಮನಶರೀರವನ್ಯಭೃತಷಟ್ಚರಣೋ
ತ್ಕರದ ದೊರೆಯಪ್ಪ ಕರ್ಪಿಂ
ಕರಮುಬ್ಬರಮಾಯ್ತು ಬಹಳ ತಮಸಂ ತಮಸಂ ೭೩

ಇದು ತಿಮಿರಾಪಹಾಂಜನಮುಲೂಕಕುಲಕ್ಕಿದು ಪುಂಶ್ಚಲೀರತ
[1]ಕ್ಕುದಿತ ತಮಾಲ[1] ಮಂಟಪಮಿದುತ್ಪಲಲಕ್ಷ್ಮಿಯ ಮಂಡನಕ್ಕೆ ಸು
ತ್ತಿದ ನವನೀಲಕಾಂಡಪಟಮಿಂತಿದು ಚಕ್ರಯುಗ[2]ಕ್ಕಗಲ್ಚಲಿ[2]
ಕ್ಕಿದ ಕಿಸು[3]ರ್ವೆೀರ[3] ಕರ್ಬೊಗೆಯೆನಿ[4]ಪ್ಪವೊಲಾ[4]ಯ್ತು ಮಹತ್ತಮಂ ತಮಂ ೭೪

(ಚಂದ್ರಪ್ರಭಪುರಾಣಂ ೮-೧೯)

ಇದು ಚೋರರದೃಶ್ಯಾಂಜನ
ಮಿದು ವೃದ್ಧಾಂಗನೆಯರೆಸೆವ ಪಲಿತೌಷಧಮಿಂ
ತಿದು ಕಾಮನ [5]ಕೂ[5]ರಲಗೆನಿ
ಸಿದುದಪ[6]ಕೃತ್ಸಾ[6]ರಮಂಧಕಾರಮಪಾರಂ ೭೫

(ಚಂದ್ರಪ್ರಭಪುರಾಣಂ ೮-೨೦)

ಸರಳಂ ವಕ್ರಂ ತರಳಂ
ಸ್ಥಿರಮುಚ್ಚಂ ನೀಚಮಿಾಕ್ಷಣಕ್ಕೊದವೆ ತಮಂ
ಸರಿಯಾದುದಂತೆ ವಿಗತಾಂ
ತರವೆನಿಪನ [7]ಮೆಚ್ಚು[7] ಬಲ್ಲರಂ ಮೆಚ್ಚಿಕುಮೇ ೭೬

(ಚಂದ್ರಪ್ರಭಪುರಾಣಂ ೮-೨೧)

ಮುಟ್ಟಿದುದಲ್ಲದಿಲ್ಲುೞಿದ ಭೂತಳಮೆಣ್ದೆಸೆಗಳ್ ನಭಸ್ಥಳಂ
ತೊಟ್ಟನೆ ಮಾಯವಾಯ್ತು ತನುವಿರ್ದಪುವಿಲ್ಲೆನುತಂ ಕರಾಗ್ರದಿಂ
ಮುಟ್ಟಿದರಿರ್ದ ತಾಣದೊಳೆ ಸುಮ್ಮನೆ ವಿಸ್ಮಯದಿಂ ಜನೋತ್ಕರಂ
ನಟ್ಟವೊಲಿರ್ಪಿನಂ ನಿಮಿರ್ದು ಪರ್ಬಿದುದುರ್ಬಿ ಮಹತ್ತಮಂ ತಮಂ ೭೭

ಇನದೀಪಂ ನಂದಿರೆ [8]ಬಂ
ದು[8] ನಿಶಾರಾಕ್ಷಸಿ ಚರಾಚರೌಘಗ್ರಸನಾ

---

1ಕ್ಕೊದವಿದ ಕಾಳ (ಖ ಬ) 2ಕ್ಕಗಲ್ಕೆ ಗಿ (ಖ) 3ರ್ವಕ್ಕೆ (ಅ) 4ಪ್ಪಿನಮಾ (ಅ) 5ಕಾ (ಅ ಖ) 6ದೃಕ್ಸಾ (ಅ) 7ಪೆರ್ಚು (ಕ) 8ಬೇಗ (ಕ)

ರ್ಥಿನಿ ಭುವನಭವನಮಂ ಭೋಂ
ಕನೆ [1]ಪಿಡಿಗೆತ್ತೆಂದುಮಾದುದಂದು[1] ತಮಂಧಂ ೭೮

(ಜಗನ್ನಾಥವಿಜಯಂ ೧೬-೧೦೧)

ಉದಯವಿಶಾಲಶೈಲದ ತಮಾಲವನಂ ನವನೀಲರತ್ನಚೂ
ಳದ ರುಚಿ ನೀರಜಾಗರದ ನೀರರುಹಂ ಮುಗಿದಿರ್ದುದಿಂದ್ರದಿ
ಙ್ಮದಗಜದಾನಸೌರಭಕೆ ಬಂದೆಳಗಿರ್ದ ಮದಾಳಿಮಾೞ್ಕೆಯೆಂ
ಬುದು ಬಗೆಗುಣ್ಮೆ ಪರ್ವಿದುದು ಪೂರ್ವದಿಗಂತಮನಾವಗಂ ತಮಂ * ೭೯

ಇದು ಮಧುಕರನಿದು ಮಲ್ಲಿಗೆ
ಯಿದು ಕೋಕಿಲನಿದು ಮರಾಳನಿದು ಮದಗಜಮಿಂ
ತಿದು ಕಂಠೀರವನಿದು ಕರಿ
ದಿದು ಬಿಳಿದೆಂದಱಿಯಬಾರದುರ್ವಿದ ತಮದೊಳ್ ೮೦

(ಗಿರಿಜಾಕಲ್ಯಾಣಂ ೪-೭೭)

ನಸುಗೞ್ತಲೆಯರೆಗೞ್ತಲೆ
ಮುಸುಕುಂಗೞ್ತಲೆ ಪೊದೞ್ದು ಪೆರ್ಗೞ್ತಲೆ ನಾ
ಲ್ದೆಸೆಗೞ್ತಲೆ ರಸಗೞ್ತಲೆ
ಪೊಸಗೞ್ತಲೆಯೆನಿಸಿ ಕೂಡೆ ತೀವಿತು ತಿಮಿರಂ ೮೧

(ಗಿರಿಜಾಕಲ್ಯಾಣಂ ೪-೭೩)

ಗಿರಿಗಳ್ ನೀಲಾದ್ರಿಯೆಂಬಂತಿರೆ ನಿಖಿಳನದೀರಾಜಿ ಕಾಳಿಂದಿಯೆಂಬಂ
ತಿರೆ ವೃಕ್ಷಂಗಳ್ ತಮಾಲಾಕೃತಿಯಿನಿರೆ ಮೃಗಶ್ರೇಣಿ ಋಕ್ಷಂಗಳೆಂಬಂ
ತಿರೆ ನಾನಾ ಪಕ್ಷಿಗಳ್ ಕೋಗಿಲೆವೊಲಿರೆ ನಭಂ ಕಾರ್ಮುಗಿಲ್ ಮುಚ್ಚಿದಂತಾ
ಗಿರೆ ಭೂನೀಳಸ್ಥ[2]ಳಂ ಕು[2]ಟ್ಟಿಮವೆನೆ ನೆಗರ್ದತ್ತೆಂದು ಘೋರಾಂಧಕಾರಂ ೮೨

ಪರಸಿದರಿರಿದಿರ್ಗೊಂಡರಲಂ
ಕರಿಸಿದರಾದರಿಸಿದರ್ ಕರಂ ನುತಿಗೆಯ್ದರ್
ಬೆರಸಿದರಪ್ಪಿದರೆಳಸಿದ
ರೆರೆದರ್ ನಲಿನಲಿದು ಜಾರೆಯರ್ಕೞ್ತಲೆಯಂ ೮೩

(ಗಿರಿಜಾಕಲ್ಯಾಣಂ ೪-೭೨)

ವಾರಿಜಮಿತ್ರನಿಂ ಮಗುರಿದಿರ್ಕೆ ತಮಂ ತವದೆಂದುಮಿರ್ಕೆ ನೀ
ರೇರುಹವೈರಿಯಂ ಸೆಳೆಯಲಿಕ್ಕುಗೆ ರಾಹು ಮನೋಜಿವಲ್ಲಭಂ

---

1 ಪೊಕ್ಕಂತಾಗಳಾಯ್ತು ಬಹಳ (ಕ) 2 ಳತ್ತು (ಬ) ★ ಇಲ್ಲಿಂದ ಮುಂದಕ್ಕಿರುವ ನಾಲ್ಕು ಪದಗಳೂ (ಕ) ಪ್ರತಿಯಲ್ಲಿಲ್ಲ

ಜಾರರಭೀಷ್ಟಮಂ ಕೊಡುಗೆ ಲಡ್ಡುಗೆಯಂ ಬೆನಕಂಗೆ ಹೆಂಡಮಂ
ಮಾರಿಗೆ ಬೊಮ್ಮೆಯಂಗೆ ಚರುವಂ ಪದೆದೆತ್ತುವೆನೆತ್ತಿ ಬೀಳುವೆಂ ೮೪

ಎಱಗುವ ಕಣ್ಣಸನ್ನೆ ಬಗೆದೋಱುವ ಪುರ್ಬಿನ ಜರ್ಬು ಜಾರರಂ
ಸೆಱೆಯಿಡುವಾನನಂ ಪದಿರನಾಡುವ ಸೊಬ್ಬುಡಿ ದುಷ್ಟಚೇಷ್ಟೆಯಂ
ಮೆಱೆಯಿಪ ತಮ್ಮ ಭಂಗಿ ಮರೆವಾಳಿ ಮನೋಜಸುಖಕ್ಕೆ ಸಂತತಂ
ಮಱುಗುವ ಚಿತ್ತದಿಂ ರಜನಿ ರಂಜನಮಾದುದು ಬಂಧಕೀಜನಂ ೮೫

ಪುರುಷರ ಸಮಕ್ಷದೊಳ್ ಕುಚ
ಭರಮಂ ನೀವುವೊಡೆ ವಾಮಕರದಿಂ ಮುಡಿಯಂ
ಹರಿಣಾಕ್ಷಿ ಬಿಟ್ಟು ಮುಡಿವೊಡೆ
ನಿರಂತರಂ ಪಾಣ್ಬೆಯೆಂದು ಬಗೆಗಾ ವಧುವಂ ೮೬

(ಮದನತಿಲಕಂ ೮-೩೯)

ಉಡೆಯಂ ಸಡಿಲಿಸಿಯುಡುವಡೆ
ನಡೆ ನೋಱ್ಪೊಡೆ ತನ್ನ ತಲೆಯುಮಂ ಕಿವಿಯುಮನಂ
ತಡಿಗಡಿಗೆ ತುಱಿಸಿಕೊಳ್ವಡೆ
ಪಡಿಮಾತೇಂ ನಿರ್ವಿಚಾರದಳಿ ಪುಂಶ್ಚಲಿಯಂ ೮೭

(ಮದಲತಿಲಕಂ ೮-೪೦)

ಬಾಲಾಲಿಂಗನ ಚುಂಬನ
ವಾಲೋಕಂ ಹಾಸ್ಯ ತಕ್ಕೆ ಸನ್ನೆಪದಿರ್ ಬ
ರ್ಪಾಳಾಪಂ ಪುಟ್ಟುಗುಮಱಿ
ಲೋಲೇಕ್ಷಣೆ ಪಾಣ್ಬನಿದಿರೊಳಸತಿಗಮೋಘಂ ೮೮

(ಮದನತಿಲಕಂ ೮-೪೧)

ನೋಡದ ಮಾಱ್ಕೆಯಿಂದಡರೆ ನೋಡುವ ಪುರ್ವಿನ ಜರ್ವಿನಿಂದೆ ಮಾ
ತಾಡುವ ಕೂಸನೆತ್ತಿ ಪರಿಚುಂಬಿಸಿ ತನ್ನ ರತೋಪಚಾರದೊಳ್
ಮಾಡುವಳುರ್ಕೆ[1]ಗಳ್ ನೆಱೆಯೆ[1] ತೋಱುವ ಸಂದಣಿಯಾಗೆ ಪೊರ್ದಿ ಬಾ
ಯ್ಗೊಡುವ ಜಾರೆ ಜಾರನ [2]ನೆಗೞ್ತೆಯ[2] ಕಾಮನ ಬಯ್ಕೆಯಲ್ಲಳೇ ೮೯

ಪ್ರತಿಮೆಯ ಪೂಜೆ ದೇವತೆಯನೆಯ್ದುವವೋಲ್ ನೆವದಿಂ ಪೆರರ್ಗೆ ಮಾ
ಡ್ಪತಿಶಯ ಚಾಟು[3]ವುಂ[3] ಮುನಿಸುಮಪ್ಪುಗೆಯುಂ ಮನದಾಸೆಯೊಳ್ಪು ಸಂ

ಕೈಗಳಯೆ (ಖ ಬ) 2 ಗಲೆತ್ತಿದ (ಕ) 3 ವಂ (ಕ ಖ) 4 ಮನದಾಣ್ಮನೊಳ್ಸು (ಕ)

ಗತರತದಲ್ಲಿ ಸಂತಸಮನೀವವೋಲ್ ಗೋಷ್ಠಿಗೆ ಜಾತಿಜಾರೆಯರ್
ಚತುರೆಯರುಂ ಬೆಡಂಗಿಯರ ಭಂಗಿಗಳಂಗಜಗೂಢಹೇತುಗಳ್ ೯೦

ಕೂಡಲ್ಪಡೆಯದೊಡಂ ಮಾ
ತಾಡಿ ಮೊಗಂನೋಡಿಯವರ ಗುಣವರ್ಣನಮಂ
ಪಾಡಿಸಿ ಮತ್ತಂ ದಣಿಯದ
ನಾಡಾಡಿಯ ಪಾಣ್ಬೆಗೊಳವು ಕುಟಿಲಮನೇಕಂ ೯೧

(ಮದನತಿಲಕಂ೮-೫೧)

ವಿವಿಧಾನ್ನ ಪಾನ [1]ಖಾ[1]ನಾ
ದಿ ವಸ್ತ್ರಲೇಪನ ಸುಗಂಧಕುಸುಮಾದಿಗಳಂ
ನೆವಮಿಟ್ಟು ಪೆಱರ್ಗೆ ಕೊಟ್ಟ
ಟ್ಟುವ ಪಾಂಗಿನ ಪಾಣ್ಬೆಯಿರವನಾರ್ ಭಾವಿಸುವರ್ ೯೨

(ಮದನತಿಲಕಂ೮-೪೨)

ಕುೞಿಪಂ ಪುರ್ವಿನ ಜರ್ವು ತೋಱಿ ಬಗೆಯಂ ಕಣ್ಸನ್ನೆಗಳ್ ಪೇಱಿತ
ನ್ನಱಕಂ ತನ್ನ ಮನಕ್ಕೆ ಕೂಡೆ ಕೆಲಕಂ ಗಂಡಂಗಮೊಳ್ಪಂ ಕರಂ
ಮೆಱೆವಾ ಪ್ರೌಢೆಯೆ ಜೋ[2]ಡೆಯಕ್ಕುಮೆಡೆಯೊಳ್ ದೂತಟ್ಟೆ ದೂಱಿಂಗೆ[2] ಪೆ
ರ್ವಱಿಯಂ ಪೊಯ್ಸಿ ಕೆಲಕ್ಕೆ ನಾಣ್ಚೆ ತಲೆಗುತ್ತಿರ್ಪಾಕೆಯೇಂ ಜಾರೆಯೇ ೯೩

(ಪಂಪಭಾರತಂ೪೦-೮೨)

ನೆವದಿಂದಂ ಮನೆಯಾಣ್ಮನಂ ಮನೆಯುಮಂ ಗೆಲ್ದ್ದೈದಿ ಸಂಕೇತಗೇ
ಹವನೊಲ್ದಂತಿರೆ ನಾಟಕಂ ನಲಿದು ಜಾರಂಗಿಂಬುಗೆಯ್ದಂಗಭಂ
ಗವ[3]ನೆಂದುಂ[3] ಪೊರೆದಾೞಿಗೊಂಡಱಿಸಿ ಬೆನ್ನೊಳ್ ಬಂದರಂ[4]ಬಂ[4]ದು ಸಾ
ಧುವಿನಂತಿರ್ಪಳೆ ಜಾತಿಜಾರೆ ಸುಡು ದೂಱಂ ಪೇಱುವಳ್ ಜಾರೆಯೇ ೯೪

ಮನೆವಾರ್ತೆಯ [5]ಕೋಟಲೆಯೊಳ್[5]
ಜನಪದಗಮನಂ ಗಳೆಡೆಯೊಳಂಗಜರಾಗಂ
ಜನಿಯಿಕ್ಕುಮೆಂದು ಕೆಲರ್ ಸ
ಜ್ಜನದಿಂ ಮನೆವಾರ್ತೆಗೈಸಲೊಲ್ಲರ್ ಚದುರರ್ ೯೫

(ಮದನತಿಲಕಂ೮-೧೩)

---

1 ನಾ (ಬ) 2 ಡೆಯಕ್ಕುಮೆಡೆಯೊಳ್ ದೂಟಂದ ದೂಟಂಗೆ (ಅ) ಕೆಯಕು ಮೆಡೆ ಯೊಳ್ ದೂರಟ್ಟೆದೂರುಂಗೆ (ಕ) ಡೆಕೂರ್ಪೆಡೆಯೊಳಂ ದೂತಟ್ಟೆದೂರುಂಗೆ (ಖಬ) 3 ನೇನಾಂ (ಕ) 4 ಬಿಂ (ಕ) 5 ತೋಟಯೊಳಂ (ಖ ಬ)

ಗುರುಗಳ ನಂಟರ ಕೆಳೆಯರ
ಪೊರೆವಾ[1]ಳ್ದನ[1] ಮೆಚ್ಚದವರ ಸವತಿಯ ಕೆಲದೊಳ್
ಪರಿಭವಿಸಲ್ ನೋಱನೆತ್ತಲ್
ಕರಮಳಲಿಸಲಾಗದಾತ್ಮಸತಿಯಂ [2]ಚದುರಂ[2] ೯೬

(ಮದನತಿಲಕಂ ೮-೧೫)

ಸುದತಿಯರಾರುಂ ಸಂಸ
ರ್ಗದ ಕತದಿಂ ದೋಷಮಂ ಗುಣಂಗಳುಮಂ ಮಾ
ಣದೆ ಕೈಕೊಳ್ವು[3]ದಱಿಂದಂ[3]
ಸುದತಿಗೆ ಯೋಜಿಸುಗೆ ನೀತಿಯಂ ಧರ್ಮಮುಮಂ ೯೭

(ಮದನತಿಲಕಂ ೮-೧೬)

ಲತೆ ಮೊದಲಾಗಿ ಸಮೀಪ
ಸ್ಥಿತವೃಕ್ಷಮ[4]ನೆಂ[4]ತುಟಾದೊಡಂ ಪರ್ಬುಗಮಾ
ಸ್ಥಿತಿಯಿಂ ಸತಿ ಸಂಗತ್ಯದ
ಕತದಿಂ ಕೆಟ್ಟಾರೊಳಾದೊಡಂ ಪುದುವಾ[5]ೞ್ಗುಂ[5] ೯೮

(ಮದನತಿಲಕಂ ೮-೧೭)

ಪತಿಭಕ್ತಿಯ ಧರ್ಮಜ್ಞೆಯ
ಮತಿವಂತೆಯ ಸಂದ ಶೌಚವಂತೆಯ ಸತ್ಯಾ
ನ್ವಿತವಚನೆಯ ಕತೆಯನೆ ಪೇ
ೞ್ಗತಿಶಯದಿಂ ತನ್ನ ಸತಿಗೆ ಪಂಡಿತನಪ್ಪಂ * ೯೯

(ಮದನತಿಲಕಂ ೮-೧೮)

ಗುಣಮುಂ ಸುಂದರರೂಪಮುಂ ವಿಭವಮುಂ [6]ಸೌಭಾಗ್ಯಮುಂ[6] ಭಾಗ್ಯಲ
ಕ್ಷಣಮುಂ ಚಾರುಚರಿತ್ರಮುಂ ಕುಲಮುಮೊಳ್ಪುಂ ಸತ್ಯಮುಂ ಧರ್ಮಭೂ
ಷಣಮುಂ ಸಂದ ಪತಿವ್ರತಾಮಹಿಮೆಯುಂ ದಾನತ್ವಮುಂ ಬಂಧುಲ
ಕ್ಷಣಮುಂ ಪೆಂಡಿರೊಳಕ್ಕುಮೆಯ್ದೆ ಪುರು[7]ಷರ್[7] ಯೋಜಿಪ್ಪುದೊಂದೋಜೆಯಂ

(ಮದನತಿಲಕಂ ೮-೧೯)

ತನ್ನ ರೂಪನೆ ಪೋಲೆ ವಂಚಿಸಿ ದಾಸಿಯಂ [8]ಪಡ[8]ವೇೞ್ದು ತಾಂ
ಚೆನ್ನ[9]ರ[9]ಲ್ಲಿಗೆ ದಾಸಿಯಂದದೆ ಪೋಗಿ ರಾತ್ರಿಯೊಳೊಂದುವರ್

---

1ಳ್ವರ (ಖ ಬ) 2ಪುರುಷಂ (ಕ) 3ರುಮದರುಂ (ಖ ಬ) 4ದೆಂ (ಕ) 5ಳ್ವರ್ (ಖ ಬ) 6ಬಿನ್ನಾಣಮುಂ (ಖ) 7ಷಂ (ಖ ಬ) 8ನಿಲ (ಖ ಬ) 9ನ (ಖ ಬ) ★ಈಪದ್ಯ (ಖ ಬ) ಪ್ರತಿಗಳಲ್ಲಿಲ್ಲ.

[1]ಭ[1]ನ್ನಪಂಕಜವಕ್ತ್ರೆ ಕೇಳ್ ವಧುವರ್ಕಳಾರುಮನಾವನುಂ
ಬಿನ್ನಣಂ ಪೊಱತುಂಟೆ ನಂಬದೆ ನಂಬಿದೆಂತೆಸೆವಂ [2]ಬುಧಂ[2] ೧೦೧

(ಮದನತಿಲಕಂ ೮-೨೪)

ನಂ[3]ಬದ[3]ರೆನ್ನರಪ್ಪರುಮನೇತಱಿಂ ಸಲೆ ನಂಬೆ ಪಾಣ್ಬೆಯರ್
ನಂಬಿಪರಿಂತನೇಕವಿಧದಿಂದೆ ವಿಚಾರಿಸಿ ನೋಡಿ ಪೆಂಡಿರಂ
ನಂಬಲೆಯಾಗ ನಂಬದಿರಲಾಗವರಿಲ್ಲದೆ ಬಾಱಲಾಗದೆ
ನೆಂಬುದಿದಕ್ಕೆ ತಕ್ಕುದೆನೆ ಬಲ್ಲರನುಳ್ಳೊಡೆ ದೇವನಲ್ಲವೇ ೧೦೨

ಮನುಮತಮಂ ವೇದಾಂತಾ
ದ್ಯನೇಕ ಧರ್ಮಾಂಗಮಂಗಳಂ ಕಲಿತಿರ್ದಾ
ಮುನಿಪರುಮಳುಪವರೆಂದೊಡೆ
ವನಿತೆಯರಳುಪುವುದದೊಂದು ಚೋದ್ಯ[3]ಮೆ ಜಗದೊಳ್[3] ೧೦೩

(ಮದನತಿಲಕಂ ೮-೨೫)

ಗೊರತಿಯ ಕಂತಿಯ ಕುಂಟಣಿ
ಯರ ಮುಂಡೆಯ ಮಾಲಾಗಾರ್ತಿಯಗಸಿತಿ ಯೋಗೀ
ಶ್ವರಿಯರ [4]ಕುಲಗೇಡಿಯನಾ
ವ ರೀತಿಯೊಳ್[4] ನುಡಿಯಲೀಯಲಾಗದು ವಧುವಂ ೧೦೪

(ಮದನತಿಲಕಂ ೮-೨೬)

ಗೊರವರ ಸವಣರ ಕಷ್ಟರ
ತಿರಿವರ ತೆಲ್ಲಿಗ[5]ರ ವಾದದವರ್ಗಳ ದೈವ್
ಜ್ಞರ [6]ಜೂಜುಗಾರರೆಂಬರ[6]
ನೆರವಿಗಳಂ ಪೊರ್ದಲೀಯಲಾಗದು ವಧುವಂ ೧೦೫

(ಮದನತಿಲಕಂ ೮-೨೭)

ಬಳರಿಯ ನೋಂಪಿಗೆ ಬೀದಿಗೆ
ಮುಳಿವರ ಮನೆಗಳ್ಗೆ ಮದ್ಯಪೀಗಳೆಡೆಗೆ ಕೋ
ಮಳೆಯಂ ಪೋಗ[7]ಲ್ಕಿತ್ತೊಡೆ[7]
ಬಳ[8]ರಿ[8]ಗೆ ಪುಷ್ಯಲ್ಚ[9]ಬಂ[9]ದ ಕುರಿಯಂತಕ್ಕುಂ ೧೦೬

(ಮದನತಿಲಕಂ ೮-೨೮)

---

1ಚೆ (ಅ) 2ವಿಟಂ (ಖಬ) 3ಮದಲ್ತೇ (ಖಬ) 4ಕಿಡಿಕಿಡಿಯನಾವಿದಿ ತಿರಿಯರೊಳಂ (ಖಬ) 5ದ ಪಾರದವರ್ಗಳ ವೈದ್ಯ (ಕ) 6ಖಳರ ಜೂಜುಗಾರರ (ಕ) 7ಲ್ವೇಳ್ದೊಡೆ (ಕ) 8ವಿ (ಖಬ) 9ವೋ (ಕ)

ಗೊರವಿತಿ ತೊತ್ತು ರಂಡೆ ರಜಕಾಂಗನೆ ನೀರೞಿವಾಕೆ ಚಿತ್ರಮಂ
ಬರೆವವಳೊತ್ತೆಗೊಳ್ವಳೆಲೆಮಾರುವ ಜತ್ತಕಿ ಸೂಲಗಿತ್ತಿ ಗೋ
ವರವಧು ಮಾಲೆಗಾರ್ತಿ ಮುದಿಗುಂಟಣಿ [1]ವೇರಡ[1] ಗಿತ್ತಿಯೆಂಬ ಪೆಂ
ಡಿರ ನೆರೆಗೊಂಡೊಡಂದಱಿಗೆ ಸಜ್ಜನವೆಂಡಿತಿ ಕೆಟ್ಟಳೆಂಬುದಂ ೧೦೭

ಲಲನೆಯರ್ಗೆ ರೂಪ ಹೀನಂ
ಕುಲಹೀನಂ ವೃದ್ಧನೆಯ್ದೆ ಪಱಿಯಂ ಶುಚಿ ಮೆ
ಯ್ಗಲಿ ದಕ್ಷನೆನಿಸುವವನಂ
ನಿಲಿಸುಗೆ ಕಾಪಿಂಗೆ ಬುದ್ಧಿವಂತನನೆಂದುಂ ೧೦೮

(ಮದನತಿಲಕಂ ೮-೩೩)

ರತಿಹೀನ ಪೆಱವ [2]ಕುಬ್ಜಂ[2]
ಮತಿವಂತಂ [3]ನಾಡೆ ವೃದ್ಧ ಕೃಶ (ಗರ್ಹಿ) ತನುಂ[3]
ಸತಿಯಂ ಕಾಯಲ್ಕಕ್ಕು
ರತಿರಾಗಿಗಳುೞಿದ ಕಾಪಿನಿಂ ನಿಂದಪರೇ ೧೦೯

(ಮದನತಿಲಕಂ ೮-೩೪)

ಚೆನ್ನಿಗನಂ ಜವ್ವನಿಗನ
ನನ್ನಿಗನಂ ಪೆಣ್ಣನಂ ಕರಂ ಸೊಬಗನುಮಂ
ತನ್ನ ಸತಿಯ[4]ರ್ಗೆ ಕಾಪಿಡೆ
ನಿರ್ಣಯದಿಂ[4] ತನ್ನ ಮನೆಯೊಳಿಟ್ಟಂ ಕಿಚ್ಚಂ ೧೧೦

(ಮದನತಿಲಕಂ ೮-೩೬)

ಚಚ್ಚನೆ ಗುಜುಗುಜು ಲೋಗರೊ
ಳಚ್ಚೊತ್ತಿದ ತೆಱದಿನೆರವು ತೊೞ್ತಿರೊಳಾಗಲ್
ಪಚ್ಚುವ ಕಾಮಿನಿ ತಪ್ಪಲೊ
ಡರ್ಚುವಳಟ್ಟಟ್ಟಿ ಪೆಱರೊಳಾದೊಡೆ ನಿರತಂ ೧೧೧

(ಮದನತಿಲಕಂ ೮-೩೭)

ನಗೆಯಿಂ ನೋಟದಿನೊಳ್ಪಿನಿಂ ವಿಭವದಿಂ ಸೌಂದರ್ಯದಿಂ ಧೈರ್ಯದಿಂ
ಬಗೆಯಿಂ ಬಲ್ಪಿನಿನಿಂಬುಕೆಯ್ವ ರತಿಯಿಂ ಚಾತುರ್ಯದಿಂ ಶೌರ್ಯದಿಂ

1 ವೇಡರ (ಬ) 2 ಗುಜ್ಜಂ (ಕ) 3 ವೃದ್ಧ ನಾಡೆ ಕುಷ್ಟನು ಹಿತನುಂ (ಕ) ಗೃಂಹಿತನುಂ (ಖಬ) 4 ಳ್ಗೆ ಕಾಪಿಟ್ಟಂ ನಲ್ಲಳೆ (ಖಬ)

ಮಿಗಿಲೀತಂ ಪೆಱರ್ಗೆಂದು ತನ್ನ ವಧುವಂ ನಚ್ಚಿಪ್ಪಿನಂ ಮಾೞ್ಕೆ ಭಾ
ಷೆಗಳಿಂ ಪ್ರೇರಕದಿಂ ಕುಲಾಂಗನೆಗೆ ಹೃತ್ಸಂತೋಷಮಂ ಸದ್ಬುಧಂ ೧೧೨

(ಮದನತಿಲಕಂ ೮-೫೨)

ಅನುಪಮ ಗುಣಗಣಯುಕ್ತೆಯ
ನನುಕೂಲೆಯನಧಿಕ ಪುಣ್ಯಲಕ್ಷಣೆಯಂ
ಮಾನಿನಿಯಂ ಸುರೂಪವತಿಯಂ
ಜನಪಂ ಮಾೞ್ಕುಂ ಕುಲಾಂಗನೆಯ ನಿಶ್ಚಯದಿಂ ೧೧೩

(ಮದನತಿಲಕಂ ೮-೫೫)

ನಿರುಪಮ ಲಕ್ಷಣಯುತೆಯರ್
ಸುರೂಪೆಯರ್ ನೃತ್ಯಗೀತವಾದ್ಯಾದಿಕಳಾ
ಪರಿಣತೆಯರನೂನಾಂಗಿಯ
ರರಸಿಯರತಿಮುಗ್ಧೆಯರ್ಕಳಾಗಲೆವೇೞ್ಕುಂ ೧೧೪

(ಮದನತಿಲಕಂ ೮-೫೮)

ಅನುಪಮ[1]ಮವರ್ಗಳ[1] ಕಾಮಂ
ಮನಕ್ಕೆ ಸುಖಮಿಲ್ಲ ನೆರೆಯೊಳಿಪ್ಪುದರುಂದಾ
ವನಿತೆಯರಿನಪಾಯಂಗ[2]ಳ
ನಿನಿತುಮನಱಿ[2]ದಾತ್ಮವಂತನಪ್ಪುದು ಭೂಪಂ* ೧೧೫

(ಮದನತಿಲಕಂ ೮-೫೮)

ಮಜ್ಜನದಡಪದ ಕರಗದ
ಸೆಜ್ಜೆಯ ಬಾಣಸಿನ ಬೆಸನುಮಂ ಕೋಶಮುಮಂ
ಬೆಜ್ಜತನದೆಡೆಯುಮಂ [3]ಪೆಱ[3]
ತುಜ್ಜುಗಮಂ ಕೂರ್ತು ವಧುಗೆ ಕೊಟ್ಟಂ ಕೆಟ್ಟಂ ೧೧೬

(ಮದನತಿಲಕಂ ೮-೫೯)

---

1ವಧುಗಳ (ಖ ಬ) 2ಳ್ ಜನಿಯಿಕ್ಕುವರು (ಖ ಬ) 3ತಿ ರ (ಖ ಬ) ★ ಈ ಪದ್ಯ (ಕ) ಪ್ರತಿಯಲ್ಲಿಲ್ಲ.
ಈ ಪದ್ಯವಾದ ಮೇಲೆ (ಕ) ಪ್ರತಿಯಲ್ಲಿ ಮಾತ್ರ ಮುಂದಿನ ಪದ್ಯ ಹೆಚ್ಚಾಗಿದೆ :-

ಅಸಗವನೆ ಕೆಯ್ದೆ ತೋಟ
ಕ್ಕೆ ಸಮ್ಮಗಾರಗೃಹಕ್ಕೆ ಪೊಲವನೆಗಳ್ಗಾಂ
ಬೆಸವೋದೆನೆಂದು ಪುಂಶ್ಚಲಿ
ಸುಸಿಲ್ಗೆವೋಗುತ್ತ ಮೀರ್ಕುಮದನರುಯಬಲೇ

(ಮದನತಿಲಕಂ ೮-೪೯)

ಒಲವೆಂದುಂ ನಿಲಲಱಿಯದು
ಕೆಲವುದಿನಂ ನಡೆಗುಮದಱಿನೊಲ್ದಾಗಳ್ ತಾಂ
ಲಲನೆಗೆ ಪು[1]ರ[1]ವೃದ್ಧಿಯುಮಂ
ಪಲವುಂ [2]ಹಾ[2]ಯಮುಮನಿತ್ತೊಡದು ಪಗೆಯಲ್ತೇ ೧೧೭

(ಮದನತಿಲಕಂ ೮-೬೧)

ಕಡುಗೂರ್ತೊರ್ಮೆಯೆ [3]ಮೊಕ್ಕಳಂ ಕ[3]ನಕಮಂ ತಾನೀಯಲಾಗಲ್ ಕರಂ
ಕೊಡುಗತ್ಯುತ್ತಮ ವಸ್ತ್ರಮಂ ಘುಸೃಣಮಂ ಕಸ್ತೂರಿಯಂ ಪುಷ್ಪಮಂ
ಮುಡಿಯಂ ಚಂದನಮಂ ಫಲಾವಳಿಗಳಂ ಕರ್ಪೂರಮಂ ನಿಚ್ಚಲುಂ
ಪಡಿಮಾತೇಂ ಪರಿರಕ್ಷಮಾಗಿ ವನಿತಾಸಂಘಕ್ಕೆ ಭೂಪಾಲಕಂ ೧೧೮

(ಮದನತಿಲಕಂ ೮-೬೨)

ಪಲತೆರದ ತೊಡಿಗೆ ಬಿಡುದಂ
ಬುಲವೊಳ್ಪುಣಿಸುಗಳನೆಯ್ದೆ [4]ಸಲಿ[4]ಸುಗೆ ಕೂರ್ತಂ
ತಲಸದೆ ಸಂಭೋಗದೊಳಂ
ಪಲವು ಬಿನದದೊಳವರ್ಗೆ ಕಳೆವುದು ಪೊೞ್ತುಂ ೧೧೯

(ಮದನತಿಲಕಂ ೮-೬೩)

ಅವರ್ಗೆ ಬಹುವ್ಯಾಪಾರಮು
ಮವರ್ಗೆ [5]ಪರಿಸ್ಪಂದ[5]ಮೆಂಬುದಂ [6]ಮಾಡಲ್[6] ಬೇ
ಡವರಂ ಸಂಕುಚಿತದೆ ಸಂ
ತವಿಡಿಸಿ ಸಂತುಷ್ಟರಾಗೆ ಮಾಳ್ಪುದು ಚದುರಂ ೧೨೦

(ಮದನತಿಲಕಂ ೮-೬೫)

ನಸುಸೋಂಕಿಯು [7]ಮೊಲ್ದುಂ[7] ಬಂ
ದೆಸಗುವೊಡಂ ನೋಂಪಿ ಋತುಮಹೋತ್ಸಾಹದೊಳಂ
[8]ಬಸನದೊಳೋತೊಡ[8]ಗೂಡುವು
ದಸಿಯಳ ಸೂೞಿಲ್ಲದೆನ್ನದೆಂದುಂ ಚದುರಂ ೧೨೧

(ಮದನತಿಲಕಂ ೮-೬೬)

---

1ರು (ಖ ಬ) 2ಪ್ರಿ (ಕ) 3ಪೊತ್ಕಳತ್ಕ (ಕ) 4ಸೂ (ಖ ಬ) 5ಮುಂಬುಧಂ (ಖ ಬ) 6ಪರಿಸ್ಕಂಧಮುಂ ಪರಿಗ್ರಹವುಂ (ಮ, ತಿ, ಓಲೆಯ ಪುಸ್ತಕ) 7 ಮೆಲ್ಪುಂ (ಖ ಬ) 8 ಪಸದನದೊವ್ಮೊಡ (ಅ) ಬೆಸನದೊಳೊಮ್ಮೊಡ (ಖ ಬ)

ಹರಿಣಾಕ್ಷಿಗೆ [1]ಪದಪಂ ರಾ
ಗರತೋತ್ಸವಮುಮೆಯ್ದೆ[1] ಪಡೆದಿಂಬಱಿಕಾ
ತುರನಾಗದೆ ಕೂಡಿರ್ದಾ
ದರಿಪುದು ಚದುರಂಗೆ ಬೇರೆ ಕೋಡೆರಡೊಳವೇ ೧೨೨

(ಮದನತಿಲಕಂ೯-೯)

ತವಕದಲವರೆಡೆಗಳ್ ಕಾ
ಣವು ಮುಂದಂ ಭೀತಿ ಬಱಿಕ ಪಲ್ಲವಿಸುತ್ತಿ
ರ್ಪುವು ಬೇಟದ ಕೂಟದ ಕೋ
ಟಿವಿಧದ ಕೋಟಲೆಗೆ ರೂಪು ಹಾದರಮಲ್ತೇ ೧೨೩

ಸೂಕನೆ ಸೀತಡೆ ಪೆರರಂ
ಜೂಱಿದಡೆ ಕೆಮ್ಮಿದಡೆ ಕಯ್ಯ ವೀಳೆಯದೆಲೆಯಂ
ಹಱಿದಡೆ ಬಾಗಿಲ ದಿಕ್ಕಂ
ಮುಱಿದಡೆ ಕುರುಪಿಂಗೆ ಪಾಣ್ಬರೆಸೆವರ್ ತಮ್ಮೊಳ್ ೧೨೪

ನೆರೆಯಲೆಡೆ ಪೊಳ್ತು ದೂತರ್
ದೊರೆಕೊಳ್ಳದೊಡಂಗನಾಜನಂ ಶುಚಿಯಲ್ಲದೆ
ನೆರೆಯಲೆಡೆ ಪೊಳ್ತು ದೂತರ್
ದೊರೆಕೊಂಡಡೆ ಶುಚಿಗಳುಂಟೆ ಪೆಂಡಿರ್ ಜಗದೊಳ್ ೧೨೫

ಎಸೆವ ಬಸಂತಮಾಸಮಿದಿರೇಱುವ ಜವ್ವನಮೂರಮಿಂಡರು
ಬ್ಬಸದ ವಿಳಾಸಿಗಳ್ ಮನೆಯ ಗಂಡನವಂ ಪೆ[2]ಗೆ[2]ಗಂಡನೆತ್ತಲುಂ
ಪೊಸಬನವಿಂಬು ಕುಪ್ಪಿಗೆಯ ಕಳ್ ಮನೆಯೊಳ್ ಪಿರಿದುಂಟು ತೋಂಟ ಕ
[3]ಣ್ಕೆ[3] ಸುರರ ಮಾತು ನೀತಿ ಗಡ ಹಾದರವಾಡದೆ ಸಾವಳೇ ಮಗಳ್ ೧೨೬

ಒಡೆಯರ ಕಾಪು ಕಟ್ಟಣಕಮೆಂದೊಡೆ ಬಂಧುಗಳಾಪ್ತರಾಗದೆಂ
ದೊಡೆ [4]ಮನ[4] ಮಿತ್ತಲೀಯಳವಳೆಂದೊಡಸಾಧ್ಯಮದೆಂದೊಡೊಲ್ಲಳೆಂ
ದೊಡೆ ಮೋಱಿಯಾಗದೆಂದೊಡೆ ಪರಾಂಗನೆಯೆಂದೊಡೆ ಸಾಮ್ಯವಲ್ಲವೆಂ
ದೊಡೆ ತಲೆಪೋಗೆಯುಂ ಬಸಿದು ಬಿಱದೆ ಸೈರಿಸರಲ್ತೆ ಕಾಮುಕರ್ ೧೨೭

(ಅನಂತನಾಥಪುರಾಣಂ ೧೧-೩೩)

---

1 ಪರಪುರುಷಂಗೆ ರತೋತ್ಸಾಹಮನೆಯ್ದೆ (ಖ ಬ) 2 ಳೆ (ಖ ಬ) 3 ಣ್ಕೆ (ಕ) 4 ಯನಿ (ಖ ಬ)

ವಧಮುಂ ಬಂಧನಮುಂ ಪರಾಭವಮುಮಂಗಚ್ಛೇದಮುಂ ಪೊರ್ದುಗುಂ
ವಿಧುವಿಖ್ಯಾತಿ[1]ಕೆ[1] ಲುಂಬುಗೊಳ್ಗು ಮಪವಾದಾತೋದ್ಯನಾದಂ ದಿಶಾ
ವಧಿಯಂ ದಾಂಟುಗುಮನ್ಯಜನ್ಮದೊಳಮಕ್ಕುಂ ದುರ್ಗತಿಕ್ಲೇಶಮೆಂ
ದಧಿರಾಜರ್ ಕೆಲರಾಲಿಸಲ್ ಮಱಿದುಮನ್ಯಪ್ರೇಯಸೀವಾರ್ತೆಯಂ ೧೨೮

(ಪಂಪರಾಮಾಯಣ ೧೨-೫೯)

ರಾವಣನುಂ ಗಡ ಸೀತಾ
ದೇವಿಗೆ ಸೋಲ್ತು ದಱ ಫಲಮನೈದಿದ[2]ನುಳಿದರ್[2]
ರಾವಣನಿಂದಧಿಕ[2]ರೆ[2]ಪೇ
[4]ೞೀ[4]ವುದೊ ಶುಚಿಯಿಲ್ಲದವನ ಗಂಡುಂ ತೊಂಡುಂ ೧೨೯

(ಪಂಪಭಾರತಂ ೮-೮೨)

ಶತ[5]ಧೃತಿ[5] ಪೌತ್ರನುಂ ಜಿತಜಗತ್ತ್ರಯವೀರನುಮಾಗಿ [6]ನೀಂ[6] ಮಹಾ
ಸತಿಗವನೀಜೆಗನ್ಯವಧುಗಾಟಿಸೆ ವಾಸವ ವಹ್ನಿ ಧರ್ಮ ನೈ
ರುತಿ ವರುಣಾನಿಲಾರ್ಥಪ ಹರರ್ ನಗುವರ್ ಮುಳಿಗುಂ ಮುರಾರಿ ವಾ
ಕ್ಪತಿ ಪೞಿಗುಂ ಮನೋಜರಿಪು ಪೇಸುಗುಮಗ್ಗದ ಕೀರ್ತಿ ಮಾಸುಗುಂ ೧೩೦

ನುಡಿಯಲಕ್ಕುಮೆ ಪಾಳಿಗೆಟ್ಟು ಪೞಿಗಂ ಪಾಪಕ್ಕಮುಳ್ಳಳ್ಕದೀ
ನುಡಿಯಂ ಚೀಃ ಪರದಾರವನ್ಯಶಯನಸ್ಥಾನಂ ಪೆರರ್ ಮಿಂದ ನೀರ್
ಮುಡಿದುತ್ಫುಲ್ಲ ಕದಂಬಕಂ ತೊಡೆವ ಕಾಶ್ಮೀರಾಂಗರಾಗಾದಿಕಂ
ಮಡಗೊಱು ಬೀಳುಡೆ ಬಾಯ ತಂಬುಲಮಿದೇನಸ್ಪೃಶ್ಯಮೇನಲ್ಲವೇ ೧೩೧

(ಪಂಪರಾಮಾಯಣಂ೯-೧೮೧)

ಹಣವಿಲ್ಲದೆ ಪೞರೆಳಸುವ
ಗುಣಮಿಲ್ಲದೆ ಗೂಢಮಪ್ಪ ಠಾವಿಲ್ಲದೆ ಕುಂ
ಟಣಿಯಿಲ್ಲದಂತೆ ಪೆಂಡಿರ್
ಗುಣವಂತೆಯರಲ್ಲದುಂಟೆ ವಸುಧಾತಳದೊಳ್ * ೧೩೨

ನೋಡಿಸಿ ನೋಡವೇೞ್ಪ ಭರಮಪ್ಪುದು ಗೆಂಟರ ಕೋಣೆಗೇರಿಯೊಳ್
ಕೇಡಱಸಲ್ಕೆ ಪೋಪ ಭರಮಪ್ಪುದು ದೇವಿಗೆ ರಾತ್ರಿಯಾತ್ರೆಯಂ
ಮಾಡುವ ನೋಂಪಿಯೊಂದು ಭರಮಪ್ಪುದು ಜಾರೆಯರಾತ್ಮ ಜಾರರೊಳ್
ಕೂಡುವ ಚಿತ್ತದಿಂ ತೆಱಪನಾಗಿಸಿಕೊಳ್ವರನೇಕ ಭಂಗಿಯಿಂ ೧೩೩

1 ಕ (ಅ) 2 ನಿವನಾ (ಅ) 3 ನೆ (ಅ) 4 ಳ (ಕ ಖ ಬ) 5 ನುತ (ಕ) ಯುತ (ಖ ಬ) 6 ಯುಂ (ಖ ಬ)
* ಈ ಪದ್ಯ (ಖ ಬ) ಪ್ರತಿಗಳಲ್ಲಿಲ್ಲ

ಕಱು ತಡೆದತ್ತು ಕಂಚನುಣಲೂಮನೆಯೂಕೆಗಳುಯ್ದರಕ್ಕ ಮಿಂ
ದೞಿಯಪನಾ[1]ೞಿ[1] ದಪ್ಪನಸಗಂ ಮ[2]ಡಿ[2] ದಾರನೆ ಕೂಸನೇತಕೆಂ
ದೞಿಯೆನದೊಂದು ಸೋಂಕಿದುದು ಪಾಡುವರಲ್ಲಿ ಬೆದಂಡೆ[3]ತೊ[3]ತ್ತನೆ
ತ್ತಱಸುವೆನೆಂದು ಪೋಪ ನೆವಮಂ ಸಮಕಟ್ಟುವರಲ್ಲಿ ಪಾಣ್ಬೆಯರ್* ೧೩೪

ಗಿಡುವಂ ಪಿತ್ತಿಲನೋಣಿಗೇರಿಡುಕುಱಂ ಪ್ರಾಕಾರಮಂ ನುರ್ಗಿದಂ
ಗಡಿಯಂ ಬೇಲಿಯನಿಕ್ಕಿಸಿರ್ದ ತಳಿಯಂ ನೀರ್ದಾಣಮಂ[4]ತೋಟಮಂ[4]
ಮಡಲಿಟ್ಟಾರವೆಯಂ ಬಱಲ್ದ ಮದಿಲಂ ಮಣ್ಗೊಂಡ ತುತ್ತಲ್ಗಳಿ
ಟ್ಟೆಡೆಯಂ[5]ಬಿಟ್ಟ[5]ಳಿದೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ ೧೩೫

ದಾರಿಯೊಳಿಡುಕುಱೊಳೋಣಿಯೊ
ಳಾರವೆಗಳ ತಳದೊಳಂಗಡಿ[6]ಯ ಮನೆಗಳೊಳಂ[6]
ಕೇರಿಯೊಳಾ[7]ವಿ[7]ಗೆಗಳೊಳಂ
ಬೇರೂಱಿತು ಜಾರರನುಭವಂ ಕಳ್ತಲೆಯೊಳ್ ೧೩೬

(ಗಿರಿಜಾ ಕಲ್ಯಾಣಂ ೮-೮೨)

ಒದವಿದ ಕೞ್ತಲೆಯೊಳ್ ಸ
ನ್ಮುದದಿಂ ಪೊರಮಟ್ಟ ಜಾರಮಿಥುನಾಳಿಗೆ ಕಂ
ಡುದೆ ಭರವೆಳಸಿತೆ ಮನವಿ
ರ್ದುದೆ ಮನೆ ಪಟ್ಟಿದುದೆ ಪಾಸು ಮುಟ್ಟಿತೆ ಮರ್ಮಂ ೧೩೭

(ಗಿರಿಜಾಕಲ್ಯಾಣಂ ೪-೮೪)

ಆಗಳುಮಾ ತಳೋದರಿಗೆ ಮೇಖಲೆಯಾಗಿ ನಿತಂಬದೊಳ್ ಕುಚಾ
ಭಾಗದೊಳೆಯ್ದೆ ಹಾರಲತೆಯಾಗಿ ರದಚ್ಛದಪಲ್ಲವಂಗಳೊಳ್
ರಾಗವಿಶೇಷಮಾಗಿ ಪೊಳೆವೊಳ್ದೊಡೆಯೊಳ್ ನಿರು ಸೋಂಕಿ ಸಂ
ಭೋಗಿಪ ಭಾಗ್ಯಮಿಲ್ಲೆನೆ[8]ಗೆಯಾದೊಡೆ ಸಲ್ಲದೆ[8] ಗಂಡನಿರ್ದೊಡಂ ೧೩೮

(ಅನಂತನಾಥಪುರಾಣಂ ೧೧-೨೨)

ಬಿಡಬೇಡಣ್ಣೆಲೆ ಬೀಡುಗೊಳ್ವೊಡೆನಸುಂ ಕಣ್ಗಾಣಳೆಮ್ಮತ್ತೆ ನೋ
ಟ್ಟಿಡೆ ಮಾವಂ ಶತವೃದ್ಧನೆನ್ನ ಪತಿಯುಂ ಬೇರೂರ್ಗೆ ಪೋಗಿರ್ದನಾಂ

1 ಡಿ (ಕ) ಲಿ (ಖ ಬ) 2 ಟ (ಕ) 3 ನೊ (ಕ) 4 ತೊಟ್ಟಿದುಂ (ಖ ಬ) 5 ಬರ್ದಿ (ಕ) 6 ಗಳೊಳ್ ಮನೆಯೊಳ್ (ಅ ಕ) 7 ಡಿ (ಖ ಬ) 8 ಗಮಾಡದೆ ಸಾಲದೆ (ಖ ಬ) * ಈ ಪದ್ಯದ ಮೊದಲನೆಯ ಪಾದವನ್ನು ಶಬ್ದಮಣಿದರ್ಪಣದ ೧೬೬ನೆಯ ಸೂತ್ರಕ್ಕೆ ಉದಾಹರಣೆಯಾಗಿ ಕೊಟ್ಟಿದೆ.

ಪಡುವೆಂ ಮೂಡಣ ಕೋಣೆಯಲ್ಲಿ ಸುೞಿವರ್ ಮತ್ತೊಬ್ಬರಿಲ್ಲೇಕೆ ನೀಂ
ಬಿಡಬೇಡೆಂದತಿಜಾತಿ ಜಾರೆ ನುಡಿದಳ್ ಜಾರಂಗೆ ವಕ್ರೋಕ್ತಿಯಿಂ ೧೩೯

ಪಡುವಳ್ ಕಿಱಿಲೊಳೆಮ್ಮ ತೊಳ್ತು ಪಡುವಳ್ ಮುತ್ತಬ್ಬೆಯಾ ಕೋಣೆಯೊಳ್
ಪಡುವಂ ಶಕ್ತಿವಿಹೀನನಂಧಬಧಿರಂ ಕೇ[1]ಳ್ ಮಾವನಾ[1] ಬಾಗಿಲೊಳ್
ಪಡುವೆಂ ಬಾಲೆಯೆನೊರ್ವಳಿಲ್ಲಿ ಮನೆಯಾಣ್ಮಂ ಪೋದನಿಂದೂರ್ಗೆ ನೀಂ
ಪಡ[2]ಲೇನೆಂದೆ[2]ಡೆವೇಡುವಯ್ ಪಥಿಕ ಮತ್ತೀ ಪೊ[3]ೞ್ತಿನೊ[3]ಳ್ ಗಾಂಪನೇ೧೪೦

(ಕಾವ್ಯಾವಲೋಕನಂ ೬೧೬)

ಉಗುರಂ ತೋಱಿದ ಕಯ್ಗಳಂ ಮುಗಿದ ಬಾಹಾಸ್ಪರ್ಶನಂಗೆಯ್ದು ಸ
ನ್ನೆಗಳಂ ಚಿತ್ತದೊಳಾಳ್ದು ಕೇತಕವನಾನೀಕಕ್ಕೆ [4]ದೇವಾಲಯಾ[4]
ಳಿಗೆ ನಾನಾ ಲತಿಕಾಲಯಕ್ಕೆ ಕೆಲಬರ್ ದೂತಟ್ಟಿದರ್ ಪೋದರಾ
ಬಗೆಗಳ್ [5]ದೂದವ[5]ರಾಗೆ ಕೈತವಕಲಾವಿಸ್ತಾರೆಯರ್ ಜಾರೆಯರ್ ೧೪೧

ಕಳಚಿ ಪಳಂಚಿ[6]ನುಂ[6]ಗುರವನುಟ್ಟಳವಟ್ಟಿರೆ ಮಲ್ಲಗಂಟಿನೊ
ಳ್ಪಳವಡೆ ಕಟ್ಟಿ ಚೊಲ್ಲೆಯಮನನ್ನಿಗೆಯಂ ಸಮಕಟ್ಟಿ ತೊಟ್ಟು ಕೆಂ
ದಳದೊಳಮರ್ಚಿ ಬಾರಿಸುತೆ ಬೊಂದುಗೆಯಂ ಕುರುಪಿಂಗೆ ಪೋದಳ
ವ್ವಳಿಸುತಮಾಗಳೊರ್ವಳಭಿಸಾರಿಕೆ ವೀರವಿಡಂಬಯಾನದಿಂ ೧೪೨

[7]ನಱು[7]ಸುಯ್ಗಂ ತನುಸೌರಭ[8]ಕ್ಕಮ[8]ಳಿವೃಂದಂ ಡಂಗುರಂಬೊಯ್ದು ಮುಂ
[9]ದಱಿ[9]ವಂ ತಪ್ಪುವು ಕಾಳವೆಂಬ ಕಡಲೊಳ್ ಕಣ್ಣೆಂಬ ಮೀನ್ಗಳ್ ದುಡು
[10]ಮ್ಮಿಱಿಯು[10]ತ್ತಿರ್ದಪವೆಂತು ನಲ್ಲನೆಡೆಗೊಯ್ವೆಂ ನಿನ್ನನಾವಂದದಿಂ
ದರಿಯಿಪ್ಪೆಂ ಹರಿಗುಟ್ಟಿ ಹಾದರಮನಾಡಲ್ ಪೋಪರೇ ಜಾರೆಯರ್ ೧೪೩

ದೆಸೆಯಂ ನೋಡದಿರಕ್ಕ ನಿನ್ನ ಧವಳಾಪಾಂಗಂ ಪೊದೞ್ದಿಪ್ಪುದಿ
ನ್ನು ಸುರಲ್ವೇಡೆಲೆ ಮುಗ್ಧೆ ನಿನ್ನ ದಶನೇಂದುಜ್ಯೋತ್ಸ್ನೆ ನೀಳ್ದಪ್ಪುದೆಂ
ದಸಮಾಲಂಬಿಕೆ ಮೌನೆಮಾಡಿ ಸಖಿಯಂ ಸಂಕೇತಸದ್ಮಕ್ಕೆ ಪ
ಲ್ಲಿಸರಂದೋರುತೆ ಮುಂದೆ ಮುಂದೆ ನಡೆ[11]ದೊಯ್ದಳ್ ದೂ[11]ತಿ ಚಾತುರ್ಯದಿ೧೪೪

ಕ[12]ಳೆದು[12] ಪಳಂಚಿನುಂಗುರುಮನೇರಿ ಮುಸುಂಕಿ ಮರಳ್ಚಿ ಸೆಕ್ಕಿ ಮೇ
ಖಳೆಯೊಳಡಂಗುವಂತೆ ನಿಱಿಯಂ ಸೆರಗಿಂ [13]ಪೊದೆದುಟ್ಟು[13] ದೂತಿ ಕೈ

---

1 ಳಜ್ಜನೀ (ಆ) 2 ಲೆಂದೆಂತೆ (ಅ) 3 ಳ್ತಿರೊ (ಅ) 4 ದೈವಾಗೃಹಾ (ಖ ಬ) 5 ಭೂದವ (ಖ ಬ) 6 ಪುಂ (ಕ) 7 ನೆರೆ (ಕ) 8 ಕ್ಕೆಯ (ಖ ಬ) 9 ಗುರು (ಖ ಬ) 10 ಮಿರಿವು (ಖ ಬ) 11 ದಳ್ ತದ್ದೂ (ಕ) 12 ಳಚಿ (ಕ) 13 ಪೊರ ಮಟ್ಟು (ಕ) ಮಿಗೆ ಪೊರ್ದು (ಖ ಬ)

ಕೊಳಿಸಿದ [1]ಬುದ್ಧಿ[1]ಯಿಂದೆಡಪಿ ನೊಂದೊಡ [2]ಮಾ[2]ಯೆನಲಮ್ಮದಂಘ್ರಿಯಂ
ತಳದೊಳವುಂಕುತಂ ನಡೆದು ಕಾಹಿನಗೇಹಮನೊರ್ವಳೆಯ್ದಿದಳ್ ೧೪೫

ಎಳಸಿ ಕಳವಳಸಿ ತಿಳಿಪುವ
ದು[3]ಳಿವೆಡೆ[3]ಗೆಡೆಯಿಲ್ಲದಡರೆ [4]ಕೆಲ್ಲೈ[4]ಸಿ ಕವ
ಲ್ದೊಳಗೊಳಗೆ ಬಳೆದಲಂಪೊಡ
ನಳುರೆ ಪದಂ ಪದದೊಳೊದವೆ ಬೆರಸು[5]ತ ನಡೆದರ್[5] ೧೪೬

ಮುನಿಸಾಗಳೆ ತಿಳಿವಾಗಳೆ
ಮನದಾಸರನುಸುರ್ವವೇಗಮಾಗಳೆ ತರದಿಂ
ನನೆಕೊನೆ [7]ಮೋಪು[7]ದುಮಾಗಳೆ
ಮನಸಿಜನ ಮಹೇಂದ್ರಜಾಲವದು ಜಾರೆಯರೊಳ್ ೧೪೭

ಕರುಮಾಡಂ ಬಕ್ಕಬಯಲ್
ಸಿರಿ[8]ಮಂಚಂ[8] ಬೀದಿಯೆಂದು ಬಗೆಬಂದೆಡೆಯೊಳ್
ನೆರೆಯಲ್ ಜಾರರ್ ಬಯಸುವ
ವರಮಂ ಸ್ಮರನಿತ್ತನೆನಿಪ ಪೆರ್ಗತ್ತಲೆಯೊಳ್ ೧೪೮

ಗಳರುತಿ ತಾಲತತ್ಕೃತಿ ಸಚುಂಬನಸೀತ್ಕೃತಿ ಹಸ್ತತಾಡನಂ
ಗಳವಿಲುಠತ್ಥಟತ್ಕೃತಿ ಲಯಂಗಳೊಳೊಂದಿ ರತೋತ್ಸವಂಗಳಂ
ಬಳೆಯಿಸಿ ಕಾದಲರ್ಗೆ ಮೆರಿದರ್ ಬಹುವಾದಿತ ಭೋಗದೇವತಾ
ನಿಳಯದ ಪಕ್ಕದೊಳ್ ಚದುರೊಡಂಬಡೆ ಕೂಡುವ ಜಾತಿಜಾರೆಯರ್ ೧೪೯

ಎನಸುಂ ಜಾರರ್ಗದೇಂ ಪ್ರೀತಿಯನೊಡರಿಸಿತೋ ಸ್ವೈರಿಣೀಸ್ವಲ್ಪಕಂಠ
ಧ್ವನಿ ಕಿಂಚಿಚ್ಚುಂಬನಂ ಸೀತ್ಕೃತಿವದನರವಂ ಮಂದನಿಶ್ವಾಸನಂ ಗೂ
ಢನಖೋಲ್ಲೇಖಾಂಕಮೀಷದ್ವಚನರಚನವಾಕ್ಪ್ರೌಢಿ ಶೀಘ್ರಾಕುಳಾಲಿಂ
ಗನಮೀಷತ್ತಾಡನಂ ಸಂಕುಚಿತರತಿ ಚಳಾಪಾಂಗಮುತ್ಕಂಪಿತಾಂಗಂ ೧೫೦

ಜನಿತಾಹ್ಲಾದಾಕು[9]ಳಾ[9]ಲೋಕನಮುಪಚಿತಸಂಪರ್ಕತಾಂಬೂಲದಾನಂ
ಮುನಿಸಂ ಕೈಕೊಳ್ವ ಕಿಂಚಿತ್ಪ್ರಣಯಕಲಹ[10]ಮ[10]ತ್ಯುತ್ಸುಕವ್ಯಾವೃತಾಲಿಂ

---

1ಬಟ್ಟೆ (ಖಬ) 2ಮಃ (ಖಬ) 3ಳುವಡಿ (ಕ) 4ಕೇಡ್ಜೈ (ಕ) 5ವಪದದೊಳ್ (ಕ) 6ಮಾತು (ಖತ) 7ಯಪ್ಪು (ಖಬ) 8ಮಾಡಂ (ಕ) 9ಳಂ (ಖಬ) 10ರ (ಖಬ)

ಗನಮಸ್ಪ[1]ಷ್ಟೋಲ್ಲಸ[1]ಚ್ಚುಂಬನಮಸದೃಶವಾಗ್ಜಲ್ಪ[2]ಮವ್ಯ[2]ಕ್ತಕಂಠ
ಸ್ವನಮಿಾಷತ್ತಾಡನಂ[3]ಬಿತ್ತ[3]ರಿಸೆ ನೆರೆದುದೋರಂದದಿ ಜಾರವೃಂದಂ ೧೫೧

(ಕುಸುಮಾವಳಿ ೪-೩೬)

ಪಾರದೆ ಬರ್ಪ ದೂದವಿಯರಂ ತವಕಂ ತೆ[4]ವೆ[4] ಮಿಕ್ಕು ನೀವಿ[5]ಯಂ[5]
ಚಾರುಕಳಾ[6]ದೊಳ್[6] ನಿಲಿಸುತುಂ ದೆಸೆಯಂ ನಸು ನೋಡುತುಂ ಪೊದ
ಳ್ದಾರು[7]ತಟಂ[7]ಗಳಿಂದಿೞಿವ ನಾಣ್ಬದನಂ ನಿರಿಯಿಂದಮೊತ್ತುತುಂ
ಜಾರೆಯರೆಯ್ದಿತಿರ್ದರುಪಕಾಂತರ[8]ನಾ ಬಹಳಾಂ[8] ಧಕಾರದೊಳ್ ೧೫೨

(ಕುಸುಮಾವಳಿ ೪-೩೫)

ಎಡಗಯ್ಯಿಂ ನೀವಿಯಂ ಸಾರ್ಚುತಮುರಸಿಜದೊತ್ತಂಬದಿಂ ಬಳ್ಕುತುಂ ಸೋ
ರ್ಮುಡಿಯಂ ಸೈತೊತ್ತುತುಂ ನೂಪುರಮನೆ ಪದದಿಂದುರ್ಚಿ ಕೈಗಿಕ್ಕುತುಂ ಕ
ಣ್ಗುಡಿಬೆಳ್ಪಿಂಗಂಜಿ ಚೀನಾಂಶುಕದ ಸೆರಗನಡ್ಡೈಸುತುಂ ನಾಡೆಯುಂ ಮೆ
ಲ್ಲಡಿಗೆಂಪಿಂ ರಾತ್ರಿಯಂ ಚಿತ್ರಿಸುತಮಸತಿಯರ್ ಪೋದರಂತತ್ತಮಿತ್ತಂ ೧೫೩

(ಕುಸುಮಾವಳಿ ೪-೩೪)

ಪೊದೞಿದ ಲಜ್ಜೆ ಪಲ್ಲಟಸದಾಸನಮುಳ್ಕದ ಬೈಗುಳಣ್ಮೆ ಪೊ
ಣ್ಮದ ನೞುಸುಯ್ಗಳುಚ್ಚಳಿಸಿ ಪತ್ತದ ಬಾಯ್ ಪಿಡಿದಾಗಳಾರ್ಪು ನಾಂ
ಟದ ನಖರೇಖೆ ಪಲ್ಲ ಕೊನೆದಾಗದ ಚುಂಬನವೆಂಬಿವಿಚ್ಚೆಯೊಳ್
ಪುದಿದಿರೆ ಮೆಚ್ಚಿದಳ್ ನೆರೆದು ಪೋಪವಳೋಪನ ಜಾಣಕೇಣಮಂ* ೧೫೪

ಮೊಲೆಬಿಣ್ಪಿಂ ಬಳ್ಕುತುಂ ಮೆಲ್ಲನೆ ಪದವಿಡುತುಂ ನೀಳ್ದಪಾಂಗಂಗಳಿಂದಿ
ರ್ಕೆಲನಂ ನೋಡುತ್ತುಮೆತ್ತಂ ಸೞಿವನೆಳಲನಾರಯ್ಯುತುಂ ದೂರದಿಂಬ
ರ್ಪುಲಿಪಂ ಕರ್ಣಾವತಂಸಕ್ಕೆರಗುವಳಿಗಳಂ ಸೋವಿ ನಿಂದಾಲಿಸುತ್ತುಂ
ಚಳವೇಣೀಭಾರದಿಂದೋಸರಿಸುವ ಮುಸುಕಂ ಸಾರ್ಚುತುಂ ಪಾಣ್ಬೆ ಪೋದಳ್ ೧೫೫

(ಲೀಲಾವತಿ ೩-೧೩)

ತಿಂಗಳ ಕಾಂತಿಯಂ ಪೞಿಗುಮೀ ಸೊಗಯಿಪ್ಪಲರ್ಗಣ್ಣ ಕಾಂತಿಯೆಂ
ದಂಗನೆ ತನ್ನ ಹಸ್ತಯುಗದಿಂದವನೊಯ್ಯನೆ ಮುಚ್ಚಿಕೊಂಡು ಕಾ
ಲುಂಗುರಮಂ ಪಳಂಚಲೆಯಲೀಯಡೆ ದಾರದೊಳೆತ್ತಿ ಕಟ್ಟಿ ಜಾ
ರಾಂಗನೆ ಜಾರನಿರ್ದೆಡೆಗೆ ದೂತಿಸಿ ಪೋಪವಳೊರ್ವಳೊಪ್ಪಿದಳ್ * ೧೫೬

---

1 ಷ್ಟಾಲಸಾ (ಖ ಬ) 2 ವಜ್ಯ (ಖ ಬ) 3 ಭೀಕ (ಖ ಬ) 4 ರೆ (ಕ) 5 ಯೊಳ್ (ಕ) 6 ಮಂ (ಅ) 7 ಯುಗಂ (ಅ) 8 ನಂದು ಮಹಾಂ (ಅ) ★ ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಕಲ್ಲೆನ್ನದೆ ಮುಳ್ಳೆನ್ನದೆ
ಸಲ್ಲಲಿತಸ್ಥಾನಮೆನ್ನದಿರ್ದಿರ್ದೆಡೆಯೊಳ್
ಪಲ್ಲವಿಸಿಯೆ ಪೂತುದು ಫಲ
ವಲ್ಲರಿಯಂ ತಳೆದುದಮಮ ಜಾರರ ಸುರತಂ ೧೫೭

(ಗಿರಿಜಾಕಲ್ಯಾಣಂ ೪-೮೭)

ಆಱಿದ ಬೆಮರಱಿದ ಕುರುಳ್
ಜಾಱಿದ ಮುಡಿ ಬಾಡಿದಧರ ನಖದೊದವಿಂ ಕೆಂ
ಪೇಱಿದ ಕಣ್ ಬಿಡ್ಡಿ ಮನಂ
ಮಾಱುತ್ತವೆರಸಿವೆರಸಿ ಜಾರೆ ಜಗುಳ್ದಿಳ್ ೧೫೮

ಜಾರಂ ಸಂಕೇತಗೇಹಾಂತರದೊಳುಳಿದು ತನ್ನೋಪವಳ್ ಬರ್ಪ ಸೈಪಂ
ಪಾರುತ್ತಿರ್ಪನ್ನವೊರ್ವಳ್ ತ್ವರಿತದೆ ಪರಿತಂದಾತ್ಮ ಚಿತ್ತೇಶನೆಂದಾ
ಜಾರಂ ತನ್ನಾಕೆಯೆಂದಂತೊಡವೆರಸಿ ಬಳಿಕ್ಕೆಯ್ದೆ [1]ಕಾ[1]ಮಗ್ರಹಂ ತೀ
ರ್ದಾರಯ್ದೋರೊರ್ವರಂ [2]ಕಂಡ[2]ಹಹ ಎನುತಮ್ ನಕ್ಕು ಕೈಪೊಯ್ದು ಪೋದರ್ ೧೫೯

ಪದೆದಮರ್ದಪ್ಪಿಯಾತುರಿಸಿ ನೋಡಿದ ಕೂಡಿದ ಕೂಡೆ ಮತನಾ
ಡಿದ ಪದೆದಿತ್ತ ತಂಬುಲದ ಚುಂಬನದಿಂಬುಗ[illegible]ಂದ್ರಜಾಲವ
ಲ್ಲದು ಕನಸಲ್ಲವಲ್ಲ[3]ನೆ[3]ನಸೆಂಬ ವಿಕಲ್ಪಮನಿಟ್ಟು ಚಿತ್ತದೊಳ್
ಕುದಿಪಮಡಂಗದೆದ್ದು ಸರಿದರ್ ತ್ವರಿತಂ ಸಲೆ ಸಂದ ಜಾರೆಯರ್ ೧೬೦

ಪೊದೆದ ನವೀನ ನೀಲಪಟವಿಕ್ಕಿದ ಕತ್ತುರಿಯಣ್ಪು ತೊಟ್ಟ ನೀ
ಲದ ತೊಡವೊಪ್ಪೆ ಜಂಗಮತಮಃಕಳೆಯಂತೆ ತಮಸ್ತಮಾಲವೃ
ಕ್ಷದ ಚಳಶಾಖೆಯಂತೆ ತಮದೊಡ್ಡಿನ ಲೋಲಪತಾಕೆಯಂತೆ ಪ
ರ್ಬಿದ ತಮ[4]ದೊಡ್ಡಿ[4]ನೊಳ್ ಸುಳಿದರಸ್ಫುಟಚಾರೆಯರಂದು ಜಾರೆಯರ್ ೧೬೧

(ಜಗನ್ನಾಥವಿಜಯಂ ೧೬-೧೦೨)

ಪದುಳಿಸದಂಗಮೆಚ್ಚರದ ಕಣ್ಮಲರಾಱದ ಸೇದೆ ಮಗ್ಗುಲಿ
ಕ್ಕದ ಪುಳಕಂಗಳಿಂಗದ ಬೆಮರ್ ಮಿಡುಕೋಡದ ಪುರ್ವು [5]ಕೆತ್ತುಗುಂ
ದದ ಕುಚ ಬೀಗಿ ಬೀಯದಧರಂ[5] ನಡುಕಂಗಿಡದೂರು ಗಂದೆಯೇ
ಳಿದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ ೧೬೨

(ಲೀಲಾವತಿ ೩-೧೫)

---

1 ನಾ (ಬ) 2 ದಂತ (ಅ ಕ) 3 ನ (ಕ ಖ) 4 ದುರ್ವಿ (ಕ) 5 ಬೀಗಿ ಬೀಯದ ತುಟಿಕೆತ್ತುಗುಂದದ ಕುಚಂ (ಅ)

ಇಂದುಪವಲ್ಲಭಂ ಮುಳಿಯೆ ದೂದವಿಗಾದುದಜೀರ್ತಿ ಬಿದ್ದಿನರ್
ಬಂದರಳುತ್ತಮಿರ್ದಪುದು ಕೂಡಿನಿಸಂ ತೊಲಗಂ ಗೃಹಾಧಿಪಂ
ಬೆಂದುದು ಸೂಚಿಶಾಲೆ ಪೊಸತಾಯ್ತು ತಳಾರುಕೆಯಿಂದು ಮೂಡಿದಂ
ಒಂದಡಸಿರ್ದೊಡೇಱಡಸಿತೆಂಬುದು ತಪ್ಪುಗುಮೇ ತಳೋದರೀ * ೧೬೩

ಎತ್ತುತ್ತುಂ ಕಟಿಸೂತ್ರಮಂ ನಸು ಬಳಲ್ದಿರ್ದುಟ್ಟುದಂ ಕೇಶದಿಂ
ದೊತ್ತುತ್ತುಂ ಪ್ರಿಯಚುಂಬಿತೋಷ್ಠಮಣಿಯಂ ವ್ಯಾಲಂಬದಿಂ ಮೆಲ್ಲನೊ
ಳ್ಗೊತ್ತುತ್ತುಂ ಪರೆದಿರ್ದ ಕುತ್ತುನವಿರಂ ದಿಗ್ಭಿತ್ತಿಯಂ ಬೆರ್ಚಿ ನೋ
ಡುತ್ತುತ್ತುಂಗ ನಿತಂಬೆ ಬಂದಳಿರುಳೊಳ್ ಜಾರೋಪಭೋಗಾಂತದೊಳ್ ೧೬೪

ಮದನಾಂಬುಪ್ಲವದುರ್ಕು ಮುಗ್ಗಿದೆ ಲಸತ್ ಪೀನಸ್ತನಂ ಕೆತ್ತುಗುಂ
ದದೆ ಸುಯ್ ನಿಲ್ಲದೆ ಕಣ್ಗಳೆಚ್ಚರದೆ ಘರ್ಮಾಂಭಃಕಣಾನೀಕಮಿಂ
ಗದೆ ರಂಭೋರುವ ಕಂಪಮರ್ಗದೆ ನಿಜೋಷ್ಠಸ್ಪಂದನಸ್ಫೂರ್ತಿ ಮಾ
ಣದೆ ಮೆಯ್ ಸೇದೆಯದಾಱದಿಂತು ಸುಸಿಲಿಂದಾ ಪಾಣ್ಬೆಯರ್ ಪಿಂಗಿದರ್ ೧೬೫

(ಕುಸುಮಾವಳಿ ೪-೩೭)

ಒಂದೆರಡೊಳ್ಕುಡಿ ತವಕದೊ
ಳೊಂದೆರಡಾಲಿಂಗನಂ ಮುಗುಳ್ನಗೆ ನೋಟಂ
ಸಂದಣಿಸುವ ಮುಂಬದನೊಳ
ಗಿಂದೀವರನಯನೆ ಪಾಣ್ಬನಂ ಬೀಳ್ಕೊಂಡಳ್ ೧೬೬

ನಿಡುಸುಯ್ಲುಂ ತನ್ನನೊತ್ತಂಬರಿಸೆ ನಿಲುಪುತುಂ ನೀಳ್ದ ನಲ್ಕೇಶದಿಂದಂ
ತೊಡೆಯುತ್ತುಂ ತೊಂಡೆವಾಯಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ
ನುಡಿಯುತ್ತುಂ ಪಾಣ್ಬನೊಳ್ ಕೂಡಿದ ರತಿವಿಷಯಖ್ಯಾತಿಯಂ ತನ್ನೊಳಾಗಳ್
ನಡೆಯುತ್ತುಂ ಪಾಣ್ಬೆಯೊರ್ವಳ್ ನಿಜಮಣಿಭವನದ್ವಾರದೊಳ್ ಬಂದು ನಿಂದಳ್ ★ ೧೬೭

ವನರುಹಕಾಂ[1]ತ[1] ಕುಟ್ಮಳಕಮಂಡಲುರಾಜಿನಿ ಹಂಸಮಾಲಿಕಾ
ತನುಸಿತವಲ್ಕಭಾಜಿನಿ ಮೃಣಾಳಲತಾಲ[2]ತಿಕೋ[2]ಪವೀತರಂ
ಜಿನಿ [3]ಕಲಿತ[3]ದ್ವಿರೇಫ ನಿವಹಾಕ್ಷಸಮಾಜಿನಿ ಶೋಕದಿಂ ಸರೋ
ಜಿನಿ ದಿನಕೃದ್ವಿಯೋಗದೆ ತಪಸ್ವಿನಿ [4]ಯಾದ[4] ವೊಲಾದಮೊಪ್ಪಿದಳ್ ೧೬೮

(ಕಾದಂಬರಿ ಪೂ. ಭಾ. ೨೭೮)

---

1 ತೆ (ಖ ಬ) 2 ಲಿತೋ (ಅ) 3 ವಳಿ (ಅ) 4 ಯಂತೆ (ಅ) ★ ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ

ಮುಳಿದ ತಿಮಿರೇಭಕುಂಭ
ಸ್ಥಳಮಂ ಶಶಿಸಿಂಹಮೊತ್ತಿ ಸೀಳಲ್ ಮುಕ್ತಾ
ಫಲಮುದಿರ್ದವೊ ನಭದೊಳಗೆನೆ
ಬೆಳಗಿದುವತಿ ಬಹಳ ತರಳ ತಾರಾನಿಕರಂ ೧೭೯

ತಾರಗೆಯ ಬೆಳ್ಪು ನವಸಂ
ಧ್ಯಾರುಣ ರುಚಿಯೊಳ್ ಪ[1]ಳಚ್ಚನೆಸೆಯೆ[1] ಮಹೋದ್ಯ
ದ್ದ್ವಾ[2]ರದೆ[2] ನಿಮಿರ್ಚಿ ಪರ್ಬಿದ
ಸಾರಂಗದ ತೊವಲವೊಲ್ ವಿರಾಜಿಸಿ ತೋರ್ಕುಂ ೧೮೦

ಲೀಲೆವಡೆದೆಸೆವ ತಾರಾ
ಮಾಲೆಯ ಜಲಜಲಿಸಿ [3]ಪೊಳೆವ[3] ಪೊಳೆಪುಗಳಿಂದಂ
ಸೋಲಿಸೆ ಪೂವಲಿಗೆದಱಿದ
ನೀಲದ ರಂಗದವೊಲೆಸೆದುದಾಕಾಶತಳಂ ೧೮೧

ಅಂಬರತಳದಿಂದಿನಪ
ರಾಂಬುಧಿಯೊಳ್ ಬೀೞೆ ನೆಗೆದ [4]ಸೀರ್ಪ[4]ನಿಗಳೊಪೇ
ಳೆಂಬಿನೆಗಂ ತಾರಾನಕು
ರುಂಬಂ [5]ಸೊಗಯಿಸಿದುವೆಯ್ದೆ[5] ಗಗನಾಂತರದೊಳ್ ೧೮೨

(ಕಾದಂಬರಿ ಪೂ. ಭಾ ೨೭೯)

ತರತರದಿಂದೆಂಟುಂ ದಿ
ಕ್ಕರಿಗಳ್ [6]ನೆರೆದೊಟ್ಟಿ[6]ಕೊಳ್ವ ಕರಪುಷ್ಕರ ಶೀ
ಕರಮೊಗೆದು ತೋರ್ಪುವೆನಲಂ
ಬರತಳದೊಳ್ ತುಱುಗಿ ಮಿಱುಗಿದವು ತಾರಗೆಗಳ್ ೧೮೩

(ಕಾದಂಬರಿ ಉ. ಭಾ. ೧೪೩)

ಇಳೆಗೆ ಪಳಗಾಲದಂಬರ
ಮೊಳ[7]ಜೋಲ್ದುಂ[7] ಬೀೞ್ಗುಮೆಂದುಂ ಧಾತ್ರಂ ಬಲ್ಪಿಂ
ದಳವಡೆ ಬೆಟ್ಟದ ಬೆಳ್ಳಿಯ
ಮೊಳೆಗಳಿವೆನೆ ತೊಳಗಿ ಬೆಳಗಿದುವು ತಾರೆಗೆಗಳ್ ೧೮೪

(ಜಗನ್ನಾಥವಿಜಯಂ ೧೬-೯೯)

---

1 ಳಂಚಲೆಯೆ (ಖ ಬ) 2 ರಿಧಿ (ಕ) 3 ಕದಪು (ಖ ಬ) 4 ನೀರ್ವ (ಖ ಬ) 5 ಪಸರಿಸಿದುದೆಯ್ದೆ (ಖ ಬ) 6 ನಿಳ್ದೆತ್ತಿ (ಖ ಬ) 7 ಸಾರ್ಗುಂ (ಅ) 8 ಳೆನಲ್ (ಅ)

ಇರದುದಯಗಿರಿಯ ದರಿಯೊಳ್
ಸುರಕರಿ [1]ಮಜ್ಜನ[1]ಕೆ ಸಾರ್ದು ಸುಯ್ಯಲೊಡಂ ಪು
ಷ್ಕರದಿನೊಗೆವತಿ [2]ವಿಶದ[2]ಶೀ
ಕರಮೆನಿಸಿದುವುದಯಿಪಮಳ ತಾರಾನಿಕರಂ ೧೭೫

(ಚಂದ್ರಪ್ರಭ ಪುರಾಣಂ ೮-೨೨)

ಗಗನಂ ಮಿತ್ರವಿಯೋಗದಿ
ನೊಗೆದಂತಶ್ಶೂನ್ಯಭಾವ[3]ದಿಂದೊಳ್[3] ಮೆಯ್ಯೊಳ್
ಮಿಗೆ ಪನಿತ [4]ಕಣ್ಬನಿಯಿದೆನೆ[4]
ಸೊಗಯಿಸಿದುವು ತರದಿನೊಗೆದು ತಾರಗೆ ಫಲವುಂ ೧೭೬

(ಚಂದ್ರಪ್ರಭಪುರಾಣಂ ೮-೨೩)

ಜವದಿಂ ಪೋದಿನನ ವರೂ
ಥವಾಜಿಗಳ ಮೊಗದೊಳೊಗೆದ ಫೇನಂಗಳ್ ವಾ
ಯುವಶದೆ ಪಱಿವಱಿಯಾಗಿ
ರ್ದುವು ಗಗನಾಂಗಣದೊಳೆನಿಸಿದುವು ಭಗಣಂಗಳ್ ೧೭೭

(ಚಂದ್ರಪ್ರಭಪುರಾಣಂ ೮-೨೪)

ನೆಟ್ಟನೆ ಬಂದಪನೆನ್ನಯ
ನಿಟ್ಟೆಯ ನಿಧಿ ಚಂದ್ರನೆಂದು ರಾತ್ರೀವಧು ತಾಂ
ಕಟ್ಟಿದ ಬಹುರತ್ನದ ಮೇ
ಲ್ಕಟ್ಟೆನಿಸಿದುಂದಂಬರಂ ಸುತಾರಾಗ್ನದಿಂ ೧೭೮

(ಗಿರಿಜಾಕಲ್ಯಾಣಂ ೪-೯೩)

ಸಂಕಳಿತ ಬಹಳ ತಾರಾ
ಸಂಕುಳದಿಂ ಪೋಲ್ತುದಭ್ರಮಾವೃತತಿಮಿರಂ
ತೇಂಕುವ ಮಲ್ಲಿಗೆ ಮುಕುಳದ
ಸಂಕುಳಮಂ ತಳೆದು ನಿಂದ ಜಗುನೆಯ ಮಡುವಂ ೧೭೯

ಓಸರಿಸೆ ಸಂಜೆ ಜವನಿಕೆ
ಯೋಸರಿಸಿದ ತೆಱದೆ ರಾತ್ರಿನರ್ತಕಿ ಪುಗುತಂ
ಸೂಸಿದ ಪುಷ್ಪಾಂಜಲಿಯೆನೆ
ಭಾಸಿಸಿದುವು ಗಗನರಂಗದೊಳ್ ತಾರಕಿಗಳ್ ೧೮೦

(ಲೀಲಾವತಿ ೧೦-೨೪)

---

1 ಸೆಜ್ಜರ (ಅ) 2 ವಿತತಿ (ಖ ಗ ಬ) 3 ದಿನಳಿ (ಅ) 4 ವು ಕಣನಿಯೆನೆ (ಖ ಬ)

ಸ್ಥಿರರಾಜ್ಯಂ ಗೆಯ್ ಕತ್ತಲೆ
ಚಿರಕಾಲಮಿರೆಂದು ಜಾರೆಯರ್ ಪದಪಿಂದಂ
ಪರಸಿಡುವ ಸೇಸೆಯಂದದೆ
ಕರಮೆಸೆದುವು ಗಗನರಂಗದೊಳ್ ತಾರಕಿಗಳ್ ೧೮೧

ಶಶಿ ಬಂದನೆಂದು ವಾರಿಧಿ
ಯೆಸೆದೊಲವಿಂ ನರರ ದಿಟ್ಟಿ ನಟ್ಟಪವೆಂದಾ
ಸಸಿಗೆ ನಿವಾಳಿಸಿ ಚೆಲ್ಲಿದ
ಪೊಸ ಮುತ್ತಿನ ಸೇಸೆಯಂತೆ ತಾರಗೆಯೆಸೆಗುಂ ೧೮೨

ಗಗನಂ ಪೂತುದೊ ತಮಮಂ
ಮಿಗೆ ನೋಡುವ ಭರದೊಳಂಬರಂ ನೆಱೆ ತಾನ
ಕ್ಷಿಗಳಂ ಪಡೆದುದೊ ಪೇಱೆನೆ
ಸೊಗಯಿಸಿದವು ತೊಳಗಿ ಬೆಳಗಿ ತಾರಗೆ ನಭದೊಳ್ ೧೮೩

(ಗಿರಿಜಾಕಲ್ಯಾಣಂ ೪-೯೦)

ಅಂಬುಜನಿಜಸಖನಸ್ತಮ
ಯಂಬರವಂಬರದ ನಡುವೆ ಬಹುತರದಿಂ ನೆ
ಯ್ದಂಬರದೊಳ್ ಕಯ್ಗೊಳಿಸಿದ
ಚುಂಬಿತ ರತ್ನಂಗಳಂತೆ ತಾರಗೆಯೆಸೆಗುಂ ೧೮೪

(ಗಿರಿಜಾಕಲ್ಯಾಣಂ ೪-೯೨)

ತಮನೆಂಬ ರಾಹುಭಯದಿಂ
ದ್ಯುಮಣಿ ಸ್ಥೂಲತೆಯನುೞಿದು ಕಿಱುಮೂರ್ತಿಗಳಂ
ಸಮುಚಿತದಿ ತಾಳ್ದನೆನೆ ಗೃಹ
ಸಮುಚಿತದೊಳ್ ತೊಳಗಿ ಬೆಳಗಿದುವು ದೀಪ್ತಿಕೆಗಳ್ ೧೮೫

ನೆಲಸಿ ನೆಲೆಗೊಂಡ ಪೆರ್ಗ
ೞ್ತಲೆಯೊಳ್ ತೊಳತೊಳಗಿ ಬೆಳಗಿ ಮಿನಿಮಿನಿಸುತ್ತಂ
ಫಲವುಂ ದೀವಿಗೆಗಳ್ ಕ
ೞ್ತಲೆ ಪೂತಂತೊಪ್ಪುತಿರ್ದುವಾ ಮನೆಮನೆಯೊಳ್ ೧೮೬

(ಗಿರಿಜಾಕಲ್ಯಾಣಂ ೪-೮೦)

ಆವರಿಸುತಿರ್ಪ ತಮಕೆ ತ
ಮೋವೈರಿ ಧರಿತ್ರಿಗೀೞಿದುಳಿಯಾ [1]ಳ(ದ)ನೆ[1] ದೀ
ಪಾವಳಿಗಳೆಸೆದವಖಿಳ ಗೃ
ಹಾವಳಿಯೊಳ್ ಬರ್ಪ ಶಶಿಗೆ ನೀರಾಜಿಪವೋಲ್ ೧೮೭

1 ಳಿನೆ (ಖ ಬ)

ಮಡದಿಯರೆಲ್ಲಂ ಪೊತ್ತಿಸಿ
ತಡೆಯದೆ ಕೈಮುಗಿದು ನೆನೆದು ಮನೆದೇವತೆಯಂ
ಕುಡಿವೆರಳೊಳಂಟುವಕ್ಕಿಂ
ದಿಡುವರ್ ಬಾಳರ್ಗೆಯಾ ಸೊಡರ್ಗುಡಿ ಕಪ್ಪಂ ೧೮೮

ಸೊಡರ್ಗುಡಿಗೆತ್ತಿ ಕೈಮುಗಿದು ಚೇಟಿಯರಂ ಬೆಸಗೊಂಡು ಸನ್ನೆಯಿಂ
ನಡೆದು ಗೃಹಾಂಗಣಕ್ಕಱಸಿ ತಾರಗೆಯಂ ನಡೆನೋಡಿ ಪಾಱಿಯಿಂ
ಕುಡಿವೆರಳಿಂದಮೊಲ್ದೆಳಸಿ ಕಾಂತೆಯರೊಯ್ಯನೆ ಸಂಜೆಮೋನಮಂ
ಬಿಡುವಿನಮುಬ್ಬಸಂಬಡುತುಮಿರ್ದುದು ಪೊರ್ದಿದ ಕಾಮುಕವ್ರಜಂ ೧೮೯

ಜಗುನೆಯ ಪೂರಮೊತ್ತರಿಪ ಗಂಗೆಯಿನೊಡ್ಡಱಿವಂತೆ ಮರ್ಬಿನು
ರ್ಬುಗಿಬಗಿಯಾಗೆ ಬೆಳ್ಪು ನೆಗೆತಂದುದಯಾದ್ರಿಯ ಸೆಜ್ಜೆರಕ್ಕೆ ಪ
ಕ್ಕೆಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್
ಬಗೆಗೊಳಿಸಿತ್ತು ಚಂದನರಸಂದೊಡೆದಂತಿರೆ ಪೂರ್ವದಿಙ್ಮುಖಂ ೧೯೦

(ಜಗನ್ನಾಥವಿಜಯಂ ೧೬-೧೦೩)

ಉಡುಪಿ[1][ಯಾ][1] ಪಿಂತನೆ ಬಂ
ದಡಸಿ ಮುಸುಂಕಿರ್ದ ತಿಮಿರನೀಲಾಂಬರಮಂ
ಪಿಡಿಯೆ ಭಯಮುತ್ತವೋಲ್ ಬೆ
ಳ್ಪಡ[2]ರ್ದುದು[2] [3]ವದ[3]ನಕ್ಕೆ ಪೂರ್ವದಿಗ್ಬಂಧಕಿಯಾ ೧೯೧

ಆರಯ್ಯದೆ ಖರಕರನೊಳ್
ವಾರುಣಿ ವಸುವಿಭವಹೀನನೊಳ್ ನೆರೆಯೆ ದರ
ಸ್ಮೇರಾನನೆಯಾದೈಂದ್ರೀ
ನಾರಿಯ ನಗೆಯಂತೆ ನೆಗೆದುವಿಂದುಕರಂಗಳ್ ೧೯೨

(ಲೀಲಾವತಿ ೬-೧೦೯)

ಉದಯಂಗೆಯ್ದುದ್ವಲಾಧೀಶ್ವರನನಮರಕಾಂತಾಳಿನೀರಾಜನಂ ಮಾ
ಡಿದ ಮಾಣಿಕ್ಯಪ್ರದೀಪಾವಳಿಯ ಬೆಳಗು ತದ್ವಾಮವಾಮೇತರಾಶಾ
ಸುದತೀಪಿಷ್ಟಾತಕಾಕೀರಣಕಪಿಶರಜಃಪುಂಜಮೆಂಬಂದದಿಂ ಪೊ
ರ್ದಿದುದೋ ಕಂದರ್ಪಯಾತ್ರಾಬಳನಪರಾಗಂ ತದುದ್ಯೋತರಾಗಂ ೧೯೩

(ಅನಂತನಾಥಪುರಾಣಂ ೭-೭೫)

1 ಪತಿ (ಖ ಬ) ಯಂ (ಗ) 2 ದಂದು (ಖ ಬ) 3 ವೇ (ಕ)

ಇದು ಘುಸೃಣಾರುಣಂ ಸುರಹರಿದ್ವನಿತಾನಿಟಿಲಂ ದಿಟಕ್ಕೆ ತಾ
ನಿದು ಬರೆದಿರ್ದ ಸಿಂಧುರದ ಕೆಂಪಡ[1] ರ್ದಿಂದ್ರ[1] [2]ಗಜೇಂದ್ರ[2] ಕುಂಭಮು
ಲ್ತಿದು ಜನಿತೇರ್ಷ್ಯೆಯಿಂದ ಮುಳಿಯೆ ತಾರಗೆ ಪಾಟಲಮಾದ ಯಾಮಿನೀ
ಮದನಮೆನಿಪ್ಪಿನಂ ದಿಟದಿನುಣ್ಮಿದುದಿಂದುವ ರಕ್ತಮಂಡಲಂ ೧೯೪

(ಚಂದ್ರಪ್ರಭಾಪುರಾಣಂ ೮-೨೬)

ವಿತತಪ್ರಾಚ್ಯಾದ್ರಿಪೀಠಾಗ್ರಿಮದರುಣಶಿಲಾವಿದ್ಧಲಿಂಗಂಬೊಲಿಂಬಾ
ಯ್ತು ತರಂಗೊಂಡೇಱ್ಗಿಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ
ದ್ಯುತವಲ್ಲೀಸ್ತಂಭಮುಜ್ಜೃಂಭಿತಕುಮುದಕುಟುಂಬಂ ತಮಶ್ಶೈಲಶಂಬಂ
ರತಿಪಾಟೋಪಾವಲಂಬಂ ಜನಿತವಿಟವಿಡಂಬಂ ಸುಧಾಸೂತಿಬಿಂಬಂ ೧೯೫

(ಜಗನ್ನಾಥವಿಜಯಂ ೧೬-೧೦೪)

ಇದು ಸಂಕ್ರಂದನದಿಗ್ವಧೂನಿಟಿಲಸಿಂಧೂರಾಂಶುವೋ ನೋಡನೋ
ಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತಮೋ ಪೇಱಿದಿಂ
ತಿದು ವಿಸ್ತಾರಿತ ಕಾಮಹೋಮಹುತಭುಕ್ಜ್ವಾಲೆಯೋ ಎಂಬ ಸಂ
ಪದಮಂ ಬೀಱಿದುದಿಂದ್ರದಿಗ್ವಳಯದೊಳ್ ಚಂದ್ರದ್ಯುತಿಪ್ರೋದ್ಭವಂ ೧೯೬

(ಗಿರಿಜಾಕಲ್ಯಾಣಂ ೪-೯೫)

ವಿರಹಿಗಳಂ ಮನೋಜನಲರಂಬುಗಳಂ ತೆಗೆದೂಱಿಕೊಂಡು ಕೊ
ಕ್ಕರಿಸದೆ ಹೃತ್ಕವಾಟಪುಟಮಂ ಬಿರಿಯೆಚ್ಚೊಡೆ ತದ್ಗುಹೌಘದಿಂ
ಸುರಿವರುಣಾಂಬುವಂ ಕುಡಿದು ನರ್ತಿಸುತಿರ್ಪ ವಸಂತಡಾಕಿನೀ
ಕರದ ಕಪಾಲಮಿಂತಿದೆನೆ ಕಣ್ಗೆಸೆದಿರ್ದುದು ಚಂದ್ರಮಂಡಳಂ ೧೯೭

ಕಳಶದ ಬಾಯ ಕೆಂದಳಿರನಂಗಜವಿಪ್ರನ ಹೋಮಕುಂಡದೊಳ್
ಬಳೆದುರಿಯಂ ನಿಶಾಂಗನೆಯ ಬಟ್ಟಲ ಕುಂಕುಮಮಂ ಮನೋಜನ
ಗ್ಗಳಿಕೆಯ ಗಂಧಸಿಂಧುರದ ನೆತ್ತಿಯ ಸಿಂಧುರಮಂ ಪೊದೞ್ದು ಪೋ
ಲ್ತಳವಿಗಳುಂಬಮಾದುದು ಸುಧಾಕರಬಿಂಬದ ರಾಜಮೇಱ್ಗಿಯಿಂ ೧೯೮

(ಲೀಲಾವತಿ ೨-೭)

ದಿಕ್ಕಾಂತಾಧರಪಲ್ಲವಕ್ಕೆ ಒಱಿಕಾ ದಿಕ್ಕಾಮಿನೀಭಾಳಪ
ಟ್ಟಕ್ಕಂ ತಾಂ ಒಱಿಕಾ ದಿಶಾಂಗನೆಯ ಕಾಶ್ಮೀರಾಂಗರಾಗೋಜ್ವಲಾ
ಸ್ಯಕ್ಕಾರಯ್ಯೆ ಸಮಾನಮಾಗಿ ನಯನಕ್ಕಿಂಬಾಗಿ ಪೂರ್ವಾದ್ರಿಕೂ
ಟಕ್ಕೆಟ್ಟಿಂದನೊಡರ್ಚುತುಂ ಕುವಲಯಕ್ಕಾನಂದಮಂ ಚಂದ್ರಮಂ ೧೯೯

(ಪಾರ್ಶ್ವನಾಥಪುರಾಣಂ ೧೦-೨೦)

---

1 ದಿರ್ದ (ಖಬ) 2 ಕರೀಂದ್ರ (ಅ)

ಸ್ಮರಶಿಖಿಯಂ ವಿಯೋಗಿಹೃದಯಕ್ಕನುರಾಗಮನಾಗಳಾಗಳುಂ
ನೆರೆದೆಸೆದಿರ್ಪ ಕಾಮುಕಜನಾಶ್ರಯಕೊರ್ಮೊದಲೀಯಲೆಂದು ಬಿ
ತ್ತರಿಸಿರೆ ತಾಳ್ದುದೆಂದುದಯಶೋಣತೆ ಶೋಭೆಯನೀಯೆ ಪೂರ್ವದಿ
ಕ್ತರುಣಿಯ ಪದ್ಮರಾಗಮಣಿದರ್ಪಣದಂತೆಸೆದಂ ಸುಧಾಕರಂ ೨೦೦

(ಪಾರ್ಶ್ವನಾಥಪುರಾಣಂ ೧೦-೨೧)

ನೆನೆಯಿಂ ನೆಯ್ದಿ [1]ಲಿನಾಲಿ[1] ನೀರ್ದಳಿಪದಿಂ ಕಾಮಾಗ್ನಿಯಂ [2]ನಂದಿಸಲ್[2]
ಮನಮಂ ತಂದ ವಿಯೋಗಿಜಾಲದೆರ್ದೆಯಂ ನಟ್ಟುರ್ಚಿಯೊಳ್ [3]ಜಾ[3]ಱಿಬೆ
ಚ್ಚನೆ ಪಾಯ್ತಂದು ವೊದಱ್ದ ರಕ್ತಜಲದಿಂ ತೊಯ್ದ ಕಂದರ್ಪದೇ
ವನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೦೧

(ಲೀಲಾವತಿ ೨-೫)

ನೆರೆದೈ ಸಂಜೆಯೊಳೆಂದು ಕಾಯ್ದೊ[4]ದೆದೊಡೇನಾತ್ಮಾಂ[4]ಗದೊಳ್ ರೋಹಿಣೀ
ಚರಣಾಲಕ್ತಕರಾಗಮಚ್ಚಿಱಿದುದೋ ಮೇಣ್ ಕಾಮಿಗಳ್ಗೀವ ಕಾ
ಮರಸಂ ಪೊಣ್ಮಿದುದೋ ತಮೋಗಜದ ಕೋಡೆಱಿಂದೆ [5]ಮೇಣ್[5] ನೊಂದುದೋ
ಹರಿಣಂ ತಾನೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೦೨

(ಆದಿಪುರಾಣಂ ೧೨-೬)

ಪುರುಡಿಂ ಕಾಯ್ದೊದೆಯಲ್ಕೆ ರೋಹಿಣಿಯ ಪಾದಾಲಕ್ತಕಂ ಮೆಯ್ಯನಾ
ವರಿಸಿತ್ತೋ ನಿಕಟಾಬ್ಧಿ ವಿದ್ರುಮ ಮಯೂಖಂ ತಳ್ತುದೋ ಪೂರ್ವಭೂ
ಧರಸಿಂಹಂ ಪೊಯೆ ನೊಂದುದೋ ಹರಿಣನೆಂಬಂತಾಗಳತ್ಯುಕ್ತ ಸೌಂ
ದರಮಾಗಿರ್ದುದು ಕಣ್ಗೆ ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೦೩

ಶೋಣತೆವೆತ್ತು ಮರೀಚಿ
ಶ್ರೇಣಿಯ ಕೆಂದಳಿರನಗ್ರದೊಳ್ ತಳೆದುದಯ
ಕ್ಷೋಣೀಧ್ರಮೆಂಬ ಕಳಶದ
ಮಾಣಿಕಗನ್ನಡಿವೊಲಾಯ್ತು ಹಿಮಕರಬಿಂಬಂ ೨೦೪

(ಜಗನ್ನಾಥವಿಜಯಂ ೧೬-೧೦೫)

ಅಲೆದಮೃತದೊಡನೆ ತಾರಾ
ಲಲನೆಯರಡಿದಳಿರನೂಡಲೆಂದು ಪದಂಗೆ
ಯ್ದಲತಗೆಯ ಪಡಲದಂತೆವೊ
ಲಲೆದುದು ಪರಿಪಕ್ವ[6]ರಾಗಾದಿಂ[6] ವಿಧುಬಿಂಬಂ ೨೦೫

(ಲೀಲಾವತಿ ೨-೮)

---

1 ಲೆನಾರಿ (ಕ ಖ ಬ) 2 ಮುಗ್ಗಿಸಲ್ (ಅ) 3 ಗಾ (ಅ) 4 ದೆಯಲಾತನ್ನಂ (ಖ ಬ) 5 ಮೇಂ (ಅ)
6 ಬಿಂಬಮಂ (ಅ)

ಪುದಿದಿರೆಪ[1]ಣ್ತೀವಿದ[1] ಬಿಂ
ಬದಾಲದಿಂ ಪಣ್ಗಳುದಿರ್ದುವೆನೆ ಸೊಗಯಿಸಿದ
ತ್ತುದಯದೊಳೊದವಿದ ಕೆಂಪಿಂ
ಪುದಿದೊಪ್ಪುವ ತಾರಕೋತ್ಕರಂ ಕೆಲಗೆಲದೊಳ್ ೨೦೬

(ಚಂದ್ರಪ್ರಭಪುರಾಣಂ ೮-೨೮)

ಅದು ಪೊಸಪವಳದ ಬಂಧೂ
ಕದ ಕೆಂಧಾವರೆಯ ದಾಸಳದ ಪೂವಿನ ಬ
ಣ್ಣದ ಸಂಪದಮಂ ಮುದದಿಂ
ಪದೆದಂದೊಪ್ಪಿತ್ತು ಚಂದ್ರಬಿಂಬವಿಡಂಬಂ ೨೦೭

(ಗಿರಿಜಾಕಲ್ಯಾಣಂ ೪-೯೯)

ಇದು ವಿರಹ ವಾರ್ಧಿಮಧ್ಯ
ಪ್ರದೇಶದಿಂದೊಗೆದ ರಾಗವಡಬಾನಳಪಿಂ
ಡದವೋಲ್ವಿರಹಿಗೆ ತೋಱಿ
ತ್ತುದಯಾದ್ರಿಯ ಮೇಲೆ ಮೆಱೆವ ಹಿಮಕರಬಿಂಬಂ ೨೦೮

(ಗಿರಿಜಾಕಲ್ಯಾಣಂ ೪-೧೦೦)

ಇದು ಮಾಹೇಂದ್ರೀಲತಾಕೋರಕಮಮರಹರಿದ್ವಲ್ಲರೀಪಲ್ಲವಂ ಪೂ
ರ್ವದಿಶಾವಲ್ಲೀಫಲಂ ತಾನೆನೆ ತರತರದಿಂದೇಱೆ ಕಣ್ಗೆಡ್ಡಮಪ್ಪಂ
ತುದಯಂಗೆಯ್ದತ್ತು ಸಂಧ್ಯಾರುಣರುಚಿರುಚಿರಂ ಕಾಮಸಾಮ್ರಾಜ್ಯಲಕ್ಷ್ಮೀ
ಮದಲೀಲಾಲಂಬಮುಜ್ಜೃಂಭಿತ ಕುಮುದಕದಂಬಂ ಸುಧಾಸೂತಿಬಿಂಬಂ೨೦೯

(ಮಲ್ಲಿನಾಥಪುರಾಣಂ ೭-೨೮)

ಉದಯೋರ್ವೀಧರಕುಂಕುಮೋದ್ಘಮರಜಂ ಪಾಯ್ವಂತೆ ಕೆಂಪೇಱೆ ಪೂ
ರ್ವದಿಶಾಕನ್ಯೆಯ ತೋಳೊಳಿರ್ದ ರಿಸಿನಂ ತಳ್ತಂತೆ ಪೊಂಬಣ್ಣವೇ
ಱೆ ದಿವೌಕಃಪ್ಲವದೊಳ್ ಮುಱುಂಗಿ ತೊಳೆದೇೞ್ವಂತೆಯ್ದೆ ಬೆಳ್ಪೇಱೆ ತ
ತ್ತ್ವದೃಢಾಭ್ಯಾಸಿಯ ಚಿತ್ತದಂತೆ ತಿಳಿದಂ ತಾರಾಮನೋವಲ್ಲಭಂ ೨೧೦

(ಅನಂತನಾಥಪುರಾಣಂ ೭-೮೩)

ತೊರೆದುದು ಚಂದ್ರಕಾಂತಮಣಿವಕ್ಕಿಗಳಪ್ಪು ಸಡಿಲ್ದುವಿಂಗಡಲ್
ತೆರೆ ಮಸಗಿತ್ತು ಮಿರ್ದುವೊಗೆತಂದುದು ಚಂದ್ರಿಕೆ ಕೂಡೆ ಮೀನ್ಗಳಂ
ಕುರಿಸಿದುವುತ್ಪಲಂ ನಗುತುಮಿರ್ದುವು ಕಣ್ಮುಗಿದಬ್ಜಮುಂ ತಮಮಂ
ಪರೆದುದು ಮನ್ಮಥಂ ನಲಿದು ನರ್ತಿಸಿದಂ ಶಶಿ ಬರ್ಪ ಪೊೞ್ತಿನೊಳ್ ೨೧೧

1 ಣ್ತಂದುವ (ಅ)

ಒಸೞ್ಕಿರ್ದುದು ಚಂದ್ರಕಾಂತಮರಲಲ್ಕಿರ್ದತ್ತು ಮುಗ್ಧೋತ್ಪಲ
ಪ್ರಸರಂ ಜಾದಿನ ಬಣ್ಣವಪ್ಪ ಬೆಳಗಂ ಕೈಕೊಳ್ಳ ಪೂರ್ವಾಸೆಯು
ದ್ದೆಸೆಯಂ ಕಂಡದಿರ್ದಾರದಿರ್ದುವು ಚಕೋರಂ ಪಾಲ್ಗಡಲ್ತೋರೆಯಂ
ಮಿಸುಗಲ್ಕಿರ್ದುದು ಮೂಡಲಿರ್ದ ಪದದೊಳ್ ತಾರಾಮನೋವಲ್ಲಭಂ ೨೧೨

ಸಂಗಡಿಸೆ ತನ್ನೊಳರುಣಪಿ
ಶಂಗಸಿತದ್ಯುತಿಗಳೆಂಬನುಕ್ರಮರುಚಿ ಶ
ಕ್ರಂಗೆತ್ತಿದ ಮಾಣಿಕಗೊಡೆ
ಪೊಂಗೊಡೆ ಬೆಳ್ಗೊಡೆಗಳೆನಿಸಿದುದು ವಿಧುಬಿಂಬಂ ೨೧೩

(ಜಗನ್ನಾಥವಿಜಯಂ ೧೬-೧೦೬)

ಶಿರದೊಳ್ ತಾರಾ [1]ಕಪೋಲಂ[1] ಪೊಳೆಯೆ ಕರಜಟಾಜೂಟಮಿಂಬಾಗೆ ಜೊನ್ನಂ
ಸುರಸಿಂಧುಸ್ರೋತಮಂ ಪೋಲ್ತಿರೆ ತೊಲಗೆ ತಮೋರಾಕ್ಷಸಂ ಚರ್ಮಚಿತ್ರಾಂ
ಬರ[2]ಬಂಧಂ[2] ಕೂಡೆ ಕಾಮಂ ಕರಮುರಿವಿನೆಗಂ ಮಂಡಲಂಗೊಂಡು ಪರ್ವು
ತ್ತಿರೆ ಸಂಧ್ಯಾರಾಗನೇತ್ರಾನಲನುದಯಿಸಿದಂ ಚಂದ್ರಚಂದ್ರಾರ್ಧ[3]ಜೂಟಂ[3] ೨೧೪

(ಲೀಲಾವತಿ ೧೦-೩೨)

ಕುವಲಯದೀರ್ಘನೇತ್ರಮಲರುತ್ತಿರೆ ಮೂಡುವ ಮೀನ್ಗಳಾಕೆಯೊ
ಪ್ಪುವ ಮುಖಪದ್ಮದೊಳ್ ಮೊಡವಿ ಮೂಡಿದವೋಲಿರೆ ಕಾಲಮೆಂಬ ಶಂ
ಭುವಿನ ಶರೀರದೊಳ್ ಪುದಿದ ಗೌರಿಗೆ ರಾಗಮನೊಡ್ಡಿಕೊಂಡು ಮೂ
ಡುವ ಮೊಲೆಯಂತೆ ಮೂಡಿದುದು ಮೂಡಣದಿಕ್ಕಿನೊಳಿಂದುಮಂಡಲಂ೨೧೫

(ಲೀಲಾವತಿ ೨-೩)

ಸೋಂಕಲೊಡಂನಿಶಾತರುಣಿಯಂ ಶಶಿ [4]ಪೋದುದು[4] ಸಂಜೆ ಸೀರೆವೋಲ್
ಪಂಕಜಲೋಚನಂ ಮುಗಿದುವೆಱವು ಬಲ್ಬೆಮರಂತೆ ತಾರಕಾ
ಸಂಕುಳಮಿಂದು ಕಾಂತವಿತತಾಚಳ ತುಂಬ ನಿತಂಬ ಬಿಂಬದಿಂ
ದಂ ಕೊಳನಾಗಿ ಸೂಸಿದುವು ತೆಳ್ಳದದಂತೆ ನವದ್ರವಾಂಬುಗಳ್ ೨೧೬

(ಲೀಲಾವತಿ ೨-೪)

ನನೆಯಂಬಂ ಮದವೇಱಿ ಕೈರವಕುಳಂ ನೀರೇಱಿ ಕಾಮಾರ್ಥಿಯ
ಪ್ಪನ ಜೀವಂ ನಡುನೆತ್ತಿಗೇಱಿ ಖರದಂಡಶ್ರೀಗೆ ಕರ್ಪೇಱಿ ಕಾ
ಮಿನಿಯರ್ ಸಂತಸದುಯ್ಯಲೇಱಿ ನೆಲೆಯಿಂದಂಭೋಧಿ ಮಿಕ್ಕೇಱಿ ಭೋಂ
ಕನೆ ಬಂದೇಱಿದನಲ್ತೆ ವಾಸವದಿಶಾಶೈಲೇಂದ್ರಮಂ ಚಂದ್ರಮಂ ೨೧೭

---

1 ಕಳಾಪಂ (ಅ) ಕಪಾಲಂ (ಬ) 2 ಖಂಡಂ (ಖ ಗ ಬ) 3 ಚೂಡಂ (ಅ) 4 ಸೋರ್ದುದು (ಅ)

ವಿದಳತ್ಕೈರವರಾಜಿ ರಾಬಲದಿಂ ಸಂತೋಷಮಂ ಮುಟ್ಟೆ ಸ
ನ್ಮುದಮಂ ತಾವರೆಯೆತ್ತಿ ಕಟ್ಟೆ ತಮಮಂ ಶೀತಾಂಶುವೆಬ್ಬಿಟ್ಟೆ ಪೆ
ರ್ಚಿದಗುರ್ವಿಂ ವಿರಹಾಳಿಯಂ ಕುಸುಮಬಾಣಂ ಕಾಯ್ದು ಬೆನ್ನಟ್ಟೆ ಮೆ
ಟ್ಟಿದನಿಂದ್ರಾಚಲಚೂಡಮಂ ಕಿರಣವೀಧೀಸಾಂದ್ರಮಂ ಚಂದ್ರಮಂ ೨೧೮

(ಗಿರಿಜಾಕಲ್ಯಾಣಂ ೪-೯೮)

ತಿಮಿರಾತ್ಮದ್ಯುತಿ ಕರ್ಪುರ್ದೋರ್ಪ ತಿಲಕಂ ತಾರಾಗಣಂ ಬಂದು ನೋ
ಡುವ ಯೊಧಂ ಮಧು ತೆತ್ತಿಗಂ ವಿರಹಿ ಮಾಱಂಕಂ ನೃಪಂ ಚಿತ್ತಸಂ
ಭವನಾಗಲ್ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೇಱುದಂ
ನವಸಂಧ್ಯಾಸುವಿಭಾಸಿ ವಾಸವದಿಶಾಶೈಲೇಂದ್ರಮಂ ಚಂದ್ರಮಂ ೨೧೯

ನಿನದತ್ಸಂಧ್ಯಾನಕಂ ನಿಗ್ಗವಣೆಯ ಪೞಿ ಪೂರ್ವಾಚಲಂ ತುಂಗ ರಂಗಂ
ತನಗಾದತ್ತೆಂಬಿನಂ ನೀಲಿಯ ಜವನಿಕೆವೋಲ್ ಪಿಂಗೆ ಸಂಧ್ಯಾತಮಂ ಮೆ
ಲ್ಲನೆ ತಾರಾನೀಕಪುಷ್ಪಾಂಜಳಿಯನೆಸೆವಿನಂ ಸೂಸಿ ತತ್ಪೂರ್ವ ರಂಗ
ಕ್ಕನುಗೈವುದ್ಯನ್ನಿಶಾನರ್ತಕಿಯ ವದನದಂತಿಂದು ಕಣ್ಗೆಡ್ಡಮಾದಂ ೨೨೦

(ಚಂದ್ರಪ್ರಭ ಪುರಾಣಂ ೮-೩೦)

ಮುದದಿಂ ತಂದಿಕ್ಕೆ ಪೂರ್ವಾಂಗನೆ ಗಿರಿಶಿರದೊಳ್ ಪೀಠಮಂ ಸತ್ತ್ರಭಾಸಂ
ಪದಮಂ ಕೈಗೊಟ್ಟು ಚೈತ್ರಂ ನಡೆತರೆ ಮದನಂ ಪುಷ್ಪಬಾಣಂಗಳಂ ಪೂ
ಡಿದ ಬಿಲ್ಲಂ ಪೊತ್ತು ಪಿಂತಂ ಬರೆ ನವ ಕುಮುದಾಮೋದ ಮಾಧುರ್ಯದಿಂ ಷ
ಟ್ಪದಗಾನಂ ಪೊಣ್ಮೆಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ ೨೨೧

(ಗಿರಿಜಾಕಲ್ಯಾಣಂ ೪-೯೭)

ಗಗನಮಹಾಂಬುರಾಶಿಯೊಳಗೊಯ್ಯನೆ ಕೊರ್ಬಿದ ಮುತ್ತು ಸುತ್ತಲುಂ
ಸೊಗಯಿಪ ಕೌಮುದೀಲತೆಯ ಬಿತ್ತು ವಿಧುಂತುದನುಂಬ ತುತ್ತು ಕಾ
ಮಿಗಳನನಂಗನಾಜ್ಞೆಯೊಳೆ ಪೋಣಿಸಿದೋಲೆಯ ಸುತ್ತು ನೋಱ್ಪೊಡಂ
ಬಗೆಗೊಳಿಸಿತ್ತು ವಾಸವದಿಶಾನನಕುಂಡಲಮಿಂದುಮಂಡಲಂ ೨೨೨

ಕರಮೆಸೆಯಿತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ
ತ್ಕರದ ವಿಪತ್ತು ತಾರೆಗಳ ತುತ್ತು ಸುಧಾಂಬುಧಿಯೊತ್ತು ಜಾರ ಸೌಂ
ದರಿಯರ ಮಿತ್ತುವಂಬರ ಪುಳಿಂದಿಯ ಮೂಗಿನ ಮುತ್ತು ನೋಡಲ
ಚ್ಚರಿಯೆನಿಸಿತ್ತು ಮೂಡದೆಸೆಯಿಂದೆಸೆಯಿತ್ತು ಹಿಮಾಂಶುಮಂಡಲಂ ೨೨೩

(ಗಿರಿಜಾಕಲ್ಯಾಣಂ ೪-೯೬)

ರವಿಕಾಂತೋಪಳವಹ್ನಿಯಿಂದಡವಿಗಳ್ ಭಸ್ಮಾವಶೇಷಂಗಳಾ
ದುವರಲ್ದೋದುವು ಬೆಟ್ಟುಗಳ್ ನದನದೀ ದ್ರೋಣೀಜಲಂ ಕಾಸಿದೆ
ಣ್ಣೆವೊಲು[1]ವೆರ್ಱ್ದು[1]ವು ಮೂಷೆಯಿಟ್ಟ ತೆಱದಿಂ ಗ್ರಾಮಸ್ಥಲಂ ಲೋಮಾ
ದುವು ರೇಣುಸ್ಥಲಿ ಕಾಜುವಿಱ್ದುವು ನಿದಾ[2]ಘದ್ರಾಘಿಮೋದ್ರೇಕದೊಳ್[2] ೧೧೯
(ರಾಮಚಂದ್ರ ಚರಿತ ಪುರಾಣಂ ೭-೭೯)

ಮೃಗಕುಳಮಾಸೆಗೆಯ್ದು ಮೃಗತೃಷ್ಣಿಕೆಯಂ ಜಲಮೆಂದು ತೃಷ್ಣೆಯಿಂ
ಪಗಲಱಿವನ್ನೆಗಂ ಪರಿದು ಗಂಟಲುರಂಬರಮಾಱಿ ಬೆಂದೊವೆಲ್
ತೆಗಳಿಗೆ ಬಿಱಿ ಬಾಯ್ಗೆ ಕ[3]ರಿ[3]ಸಂ ಬರೆ ನಾಲಗೆಗಿಲ್ತ ನಟ್ಟದಿ
ಟ್ಟಗಳೊಡನಳ್ಳೆವೊಯ್ಯೆ ನಡೆಗೆಟ್ಟವು ತೃಷ್ಣೆಯಿನಾರೊ ಬೇಯದರ್ ೧೨೦
(ರಾಮಚಂದ್ರ ಚರಿತ ಪುರಾಣಂ ೭-೯೩)

ಬಹು ತಾಪಕ್ಕೆ ಬಿಗುರ್ತು ವಿಷ್ಣು ಪೆಡೆವಂ ಮತ್ಸ್ಯಾವತಾರಕ್ಕಿನಂ
ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ ದೇವರ್ಕಳಾಗ್ನೇಯಮೆಂ
ದು ಹವಿರ್ಭಾಗಮನೊಲ್ಲದಿಂದುಕಲೆಯಂ ಕೊಳ್ವರ್ ಮೃಡಂ ಪಾರ್ವತೀ
ಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನಂದಾಲಿಂಗನಂ ಮಾಡುವಂ ೧೨೧
(ರಾಮಚಂದ್ರ ಚರಿತ ಪುರಾಣಂ ೭-೯೮)

ಹುತ್ತಿನೊಳುಬ್ಬೆಗೊಂಡು ಪೊಱಮಟ್ಟು ಪಗಲ್ ಬಿಸಿ[4]ಲಱ್ವ[4]ಕೆಂಡಮಂ
ಪತ್ತಿಸಿದಂತೆ ಕಾಯ್ವ ಮಣಿಯಿಂ ಪೆಡೆ ಬೇಯೆ ಪೊದಱ್ದು ಧೂ[5]ಳಿ[5]ಯೊಳ್
ಪೊತ್ತಿದ ಧೂಳಿವಟ್ಟೆಯೊಳುರಂ ಪು[6]ಗು[6]ಳೆಱಿ ಪೊ[7]ರ[7]ಳ್ದು ಪೋಗಿ [8]ಪೊ
ಕ್ಕಿತ್ತಗಿ[8]ದೊಂದು ಪಾೞಿ ಪಾೞಿವಾವಿಯ ನೀರ್ದೆಗೆದಿರ್ದ ಬೀಡೆಯಂ ೧೨೨

ಅತಿತಪೋದ್ದೃಪ್ತಧೂಳೀಪಿಹಿತಮಹಿತಳಂ [9]ತುಂಗ[9]ವಾತೂಳಿಕಾಲಿಂ
ಗಿತ ರೋದೋಮಂಡಲಂ ಪ್ರೋಚ್ಚಲಿತಮರುಮರೀ[10]ಚಿವ್ರಜವ್ಯಾಪ್ತ[10]ದಿಕ್ಸಂ
ತತಿ ಬಂದತ್ತಗುರ್ವಿಂ ಬಗೆಗೆ ಪಡೆದಮೋಘಂ ಸಮುದ್ಧೂತ[11]ಮಾಘಂ[11]
ಹೃತನದ್ಯೌಘಂ ವಿಮೇಘಂ ಜನಿತಜನಮನೋಗ್ಲಾನಿದಾಘಂ ನಿದಾಘಂ ೧೨೩
(ಚಂದ್ರಪ್ರಭ ಪುರಾಣಂ ೯-೬೫)

ಅರ್ಕಾಂಶುವಿಂದೆ ಪಾಲ್ಗಡ
ಲುಕ್ಕಲ್ ನೀರ್ದಳಿಯಲುದಕಮಿಲ್ಲದೆ ಹರಿ ತಾಂ

---

1 ಬೆರ್ದುರ್ (ಖ ಬ) 2 ಘೋದ್ರೇಕದಿಂದಂ ಕರಂ (ಖ ಬ) 3 ರು (ಖ ಬ) 4 ಲೆಳ್ವ (ಕ) ಲೇಳೆ (ಖ ಬ) 5 ವೆ (ಕ) 6 ನ (ಕ) ರು (ಖ ಬ) 7 ದ (ಖ ಬ) 8 ತಾಂ ಪೊತ್ತನಿ (ಕ ಖ ಬ) 9 ತೂಲ (ಖ) 10 ಚೀಜಾಲ (ಅ) 11 ಮೋಹಂ (ಖ ಬ)

ತರ್ಕೈಸಿಕೊಂಡು ಪೋದಂ
ಪರ್ಕೈಯನೆನಿಸಿತ್ತು ಲೋಕಭೀಷ್ಮಂ ಗ್ರೀಷ್ಮಂ ೧೨೪

ಹಿಮತಾಂಬೂಲೋರುರಾಗಾಧರಮದೃಢನಿತಂಬಾಂಬರಂ ತಾಲವೃಂತೋ
ತ್ಥಮರುದ್ವ್ಯಸ್ತಾಲಕಂ [1]ನಿಸ್ಸ[1] ತಮಧುಲವಸಾ[2]ದ್ರೋದ್ಗ [2]ಮಾಲಂಬಿಕೇಶಂ
ವಿಮಲೋದ್ಯದ್ಯಂತ್ರಧಾರಜಲಕಲುಷಿತನೇತ್ರಾಂಜನಂ ಚಂದನಾಪಾಂ
ಡಿಮಗಾತ್ರಂ ಗ್ರೀಷ್ಮ ಸಾಯಂಸಮಯದೊಳೆಸೆದತ್ತಂದು ಬಾಲಾಕಳಾಪಂ ೧೨೫

(ಚಂದ್ರ ಪ್ರಭ ಪುರಾಣಂ೯-೮೨)

ತುರುಗಿ ನದೀನದಂಗಲ ಜಲಂಗಳೆ ಕಾ[3]ಯ್ದೆ [3]ಸರೆಣ್ಣೆಯಂದದಿಂ
ಬೞತವು ಮೀಂಗಳಟ್ಟ ತೆಱದಿಂ ಕುದಿಗೊಂಡವು ನಾಗಲೋಕದಿಂ
ಪೊೞಮಡಲಾಸೆಗೆಯ್ದ ನಹಿನಾಯಕನಂಬುಧಿ ಬತ್ತೆ ಮಾಣಿಕಂ
ಮಿಱುಗಲಕದೊಂದು ಕೆಂಡದೊಲೆಯಯಿಪರವೊಲಿರ್ದ(ನಹೀಶ)ನಾವಗಂ ೧೨೬

ಸ್ಮರರಾಗಕ್ಕಂತರಾಯಂ ಜಲನಿಧಿಗೆರ್ದೆಗಿಚ್ಚೀಕ್ಷಣಕ್ಕಂಕುಶಂ ಹು
ಲ್ಲುರಿ ದಿಗ್ಜಾಲಕ್ಕೆ ಶೈಲಕ್ಕಶನಿ ಕರಗಸಂ ಹಸ್ತಿ ಮಸ್ತಕ್ಕೆ ಪಾಂಥ
ಗುರ್ಱಿಗುಯ್ಯಲ್ ತಾರು[4]ಗು[4]ತ್ತಂ ತರುಗೆ ತಪನರಾಜೀಸಮೂಹಕ್ಕೆ ದಾಹ
ಜ್ವರಮತ್ಯುದ್ದಾಹಭೀಮಾತಪಮೆನಲುರಿದತ್ತಂದಿಳೌಘಂ ನಿದಾಘ ೧೨೭

ನದನದ್ಯೌಘಾಂಬುವಂ ಪೀರ್ದೆಳೆ ನೇಱಿಯದೆ ಬಾಯ್ಬಿಟ್ಟವೋಲ್ ಬೀಡೆಗಳ್ ಪ
ರ್ವಿದು[5]ವುಷ್ಣಾಂ[5] ಶುಪ್ರಭಾಮಂಡಲದ ಪುದುವಿನಿಂ ಬೆಂದವೋಲಾಗಸಂ ಕಂ
ದಿದುದಾದಂ ದಿಗ್ವಧೂಸಂತತಿಯೊದವಿದ ತಾಪಕ್ಕೆ ಮೆ[6]ಯ್ಯಾನದಳ್ವಂ[6]
ದದ ಭೇರೀರಾವಮುರ್ವಿರ್ದುದು ದೆಸೆಗಳೊಳೇಂ ಗ್ರೀಷ್ಮಮಾದತ್ತೊ ಭೀಷಂ ೧೨೮

(ಚಂದ್ರ ಪ್ರಭ ಪುರಾಣಂ೯-೬೬)

ಜ್ವಲನೋಷ್ಮ ಗ್ರೀಷ್ಮತಾಪಕ್ಕಗಿದಡವಿಗಳೊಳ್ ಬೈಗುವೊಳ್ತಿಪ್ಪಿನಂ ಪ
ಲ್ವಲಶಯ್ಯೋದ್ದೇಶಮಂ ಪಿರ್ದಿದುದಿರದೆ ಮುಹುಶ್ಶೃಂಗನಿಸ್ತಾಡನ ಪ್ರೋ
ಚ್ಚಲಿತಾಂಭಶ್ಶೀಕರಂ ಸೈರಿಭವಿಸರಮಗಾಧಸ್ರವಂತೀಹ್ರದಾಂತ
ರ್ಜಲದೊಳ್‌ನಿಷ್ಕಂಪಿತಾಂಗಂ ಮುೞುಗಿದುದು ಬಹಿಃಪುಷ್ಕರಂ ಹಸ್ತಿಯೂಥಂ ೧೨೯

(ಚಂದ್ರಪ್ರಭ ಪುರಾಣಂ೯-೬೮)

ಬಿಡದಿನ್ನುಂ ತನ್ನನೆಮ್ಮನ್ವಯದ ಗಜಮವೆಂಟುಂ ಕೊರಲ್ಗೊಂಡು ಪೊತ್ತಿ
ರ್ದೊಡಮೆಮ್ಮೊಳ್ ಕಾ[7]ಯ್ಪನಿಂ[7]ತೀಯವನಿ [8]ಮೆ[8]ಳದಪಳ್ ಮಾಣದೆಂದೆಂದು ಪುಯ್ಯ

1.ವಿಶ್ರು (ಖ ಬ) 2. ದ್ರೋತ್ತ (ಕ ಖ ಬ) 3ಯ್ವೆ (ಖಬ) 4ತು ( ಖ ಬ ) 5 ವಶ್ಮಾಂ( ಖ ಬ ) 6 ಯ್ಯನ್ನದಳ್ವಂ (ಅ) ಯಾನರಳ್ವಂ ( ಖ ಬ )7 ಯ್ವಳಿಂ ( ಖ ಬ ) 8 ಮ ( ಖ ಬ )

ಲ್ಗುಡುವಂತಾತ್ಮಾಗ್ರಹಸ್ತಂಗಳೊಳಿನಕಿರಣೋದ್ಧೀತಿಯಿಂ ಪಲ್ಲವಂಗ
ಳ್ವಿಡಿದುಗ್ರಗ್ರೀಷ್ಮದೊಳ್ ಸಾಮಜವಿತತಿ ತೊಱಲ್ದತ್ತು ವಾರ್ವಾಂಛೆಯಿಂದಂ ೧೩೦

(ಚಂದ್ರಪ್ರಭ ಪುರಾಣಂ-೬೯)

ನಯನಾಘಚ್ಚಲದಿಂದೆ ನೈದಿಲೆಸಳಂ ಶಕ್ರಂ ಮುಸುಂಕಿಟ್ಟನೈ
ದೆ ಯಮಂ ಛಾಯೆಯನೊಂದಿನಿತ್ತಗಲದಿರ್ಪಂ ಪಾಶಹಸ್ತಂ ಪಯೋ
ಧಿಯನಾಶ್ರೈಸಿದನಾವಗಂ ತುಹಿನಭೂಮೀಧ್ರಕ್ಕೆ ಸಾರ್ದಂ ಹರ
ಪ್ರಿಯಾವರ್ತಿಸೆ ತಳ್ತು ನಾಲ್ದೆಸೆಯುಮುಂ ಗ್ರೀಷ್ಮ ಪ್ರತಾಪೋದಯಂ ೧೩೧

(ಚಂದ್ರಪ್ರಭ ಪುರಾಣಂ-೬೭)

ಬೇಸಗೆಯ ಬಿಸಿಲೊಳಾಕ್ರೈ
ಲಾಸನಗಂ ನೋಱಿಯೆ ಕರಗಿ ಕ[1]ಣ್ಣೆ[1]ಟ್ಟು ಕರಂ
ಸೂಸಿ ಪರಿದಪುದು ದೆಸೆಗೆನೆ
ಮಾಸರಮಾಗಿರ್ದುವೊಗೆದ ಮೃಗತೃಷ್ಣಿಕೆಗಳ್ ೧೩೨

(ಚಂದ್ರಪ್ರಭ ಪುರಾಣಂ-೭೧)

ಬಿಸಿಲಳುರೆ ಕರಗಿ ಹರಿವ
ಶ್ಮಸಾರಮಂ ಗಿರಿಯ ನಿರ್ಝರಂಗೆತ್ತೀಂ ಚುಂ
ಬಿಸಿ ಚಂಚು ಬೇಯೆ ತಲೆ[2]ಬಿದಿ[2]
ರ್ದಸುವರೆಯಾದುದೊ ತೃಷಾರ್ತನೊಂದು ಮಯೂರಂ ೧೩೩

(ಚಂದ್ರಪ್ರಭ ಪುರಾಣಂ-೭೨)

ಕಡುವಿಸಿಲ ಕಾಯ್ಪಿನಿಂ ಬಿ[3]ರಿ
ದೊ[3]ಡೆದುಗೆ ಬಿಸುಮುತ್ತು ಸೋರ್ವ ಸೀರ್ಪನಿಗೆತ್ತೊಂ
ದೆಡೆಮಡಗದೆ ನೊಣೆದು ನವಿಲ್
ಮುಡುಕಿದುದತಿತೃಷ್ಣೆಯಿಗು [4]ಮೆರ್ದೆಗದವಱಲಂ[4] ೧೩೪

(ಚಂದ್ರಪ್ರಭ ಪುರಾಣಂ-೭೩)

ಪರಿಪೂರ್ಣಗರ್ಭಭರದಿಂ
ಬರಲಾರದೆ ನಿಂದೊಡ್ಯೈದಿ ನದಿಯಂ ಜಲಮಂ
ಪಿರಿದೂಡಿ ಬಂದು ತೆಗೆತೆಗೆ
ದಿರದೆಳದುದು ಕರುಣೆಯಿಂದೆ ಕರಿಣೆಗಿಭೇಂದ್ರಂ ೧೩೫

(ಚಂದ್ರಪ್ರಭ ಪುರಾಣಂ-೭೬)

---

1 ಣ್ಗೆ (ಅ) 2 ವಿಡಿ (ಖ ಬ) 3 ದುವೊ (ಅ) 4 ಮಂತೆರ್ದೆಗರಲಂ (ಖ ಬ)

ಒದಗಿದ ಬೆಟ್ಟ ಬೇಸಗೆಯ [1]ಕೂ[1] ರ್ವಿಸಿಲರ್ವಿಸೆ ಬೆರ್ಚಿ ವಾಯುವೇ
[2]ಗದೆ[2] ಹರಿಣಂ ಸಮು[3]ತ್ಪುತ[3] ದಿನಿಂದುವ ಬಿಂಬಮನೋಡಿ ಪೊಕ್ಕು ಮ
ಧ್ಯದೊಳೊಸರತ್ತು ಸುಧೆಗಂ ಕುಳಿರ್ವಾಲನೆಳಲ್ಗಮಲ್ಲಿ ಪೋ
ಗದೆ ನೆಲಸಿರ್ದುದಲ್ಲದೊಡದೆಲ್ಲಿಯದೇಣಶಶಾಂಕಸಂಗಮಂ ೧೩೬

(ಚಂದ್ರಪ್ರಭ ಪುರಾಣಂ-೭೭)

ಬಿಸಿಲೊಳೆ ಬಿಬ್ಬರಂ ಬಿರಿದ ಮಸ್ತಕಶುಕ್ತಿ[4]ಕೆಯಿಂದೆ ಮುತ್ತು[4] ಮುಂ
ದೆಸೆ [5]ಕವಿತಂದೊಡಾಂತಿರುತೆ[5] ನೋವುಮನಿಂತಿದಪೂರ್ವತೋಯಭೃ
ದ್ವಿಸರದೆ ವಾಃಕಣಂಗಳುಗುತಂದಪುವೆಂದೆ ಪೊಡರ್ಪುಗೆಯ್ದು ಪೂ
ರಿಸುವಳಿ[6]ಪಿಂದೆ[6] ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ ೧೩೭

(ಚಂದ್ರಪ್ರಭ ಪುರಾಣಂ-೭೫)

ನೀಱೆಯರೆತ್ತಿ ತಂದೆರೆವ ತಣ್ಣ[7]ರಗಂ[7] ಗಳನಗ್ರನಾಳದಿಂ
ದೂಱಿದ ಧಾರೆಯೊಡ್ಡಿದ ಕರಾಗ್ರದಿನಾನನದತ್ತ ತುಂತುಱಿಂ
ತೋರೆ ಕೊರಳ್ ತಗುಳ್ದು ಮಿಡುಕಾಡೆ ವಿಲೋಚನಮೊಯ್ಯನೇಱಿಮೆ
ಯ್ಯಾಱೆ ನಿಜೇಚ್ಛೆಯಿಂದುಸಿರ್ದು ನೀರ್ಗುಡಿವಂದಗದಿಂದಮೊಪ್ಪುಗುಂ (?) ೧೩೮

ಪೂಸಿದ ಚಂದನಂ ಮುಡಿದ ಪಾದರಿ ತೊಟ್ಟೆಳಮುತ್ತು ಸುತ್ತಿನೊಳ್
ಮಾ[8]ಸೆದ ತೆಂಗಿನೋಲೆ ಹದನಾಳದ ಬೆ[9]ಳ್ಮ[9]ಡಿ ಮೆಲ್ಲಪಚ್ಚೆನೀ
ರ್ವಾಸು ತಗುಳ್ದ ಗಂಜಣಿಯೊಳೊಂದಿದ ಬಾಳದ ಬೇರೆ ಚಪ್ಪರಂ
ಬೇಸಗೆ ಸಂದ ಭೋಗಿಗೆ ವಿಲಾಸದ ದೇಸೆಯನುಂಟು ಮಾಡುಗುಂ ೧೩೯

ಪೂಸುವ ಬೀಸುವ ಮುಡಿಯಂ
ಪಾಸುವ ನೀರ್ಗುಡಿಯಲೞಿವ ಕೞ್ಮೈವೆಸದೊಳ್
[10]ವಾಸಂತಂ[10] ವಿಟರ್ಗಾದುದು
ಬೇಸಗೆಗಾದುದು ಬೊಜಂಗತನಮಬಲೆಯರೊಳ್ ೧೪೦

ಮದನವಿಕಾರಮಂ ವಿರಚಿಪಲಕ್ಕಿಗೆ ಬೇಸಗೆ ಸೂಳೆಬಂಟನಾ
ದುದು ವಿಟರ್ಗಂಗನಾಜನದೊಳೆಂತೆನೆ ವಿಶ್ಲಕಥಮುತ್ತರೀಯಮಾ

---

1 ಪ (ಕ ಖ ಬ) 2 ರಿಂದ (ಅ) 3 ತ್ನುಕ (ಕ ಖ ಬ) 4 ಯಮುತ್ತಿನಿಂದ ( ಖ ಬ) 5 ಗುರುದಂತರಂದುರದೆ (ಖ ಬ) 6 ಬುಧ ( ಖ ಬ) 7 ಳಸಂ (ಖ ಬ) 8 ಸಿ (ಖ) 9 ಳ್ಪ ( ಗ ಫ) 10 ಪಾಶತ್ವಂ ( ಕ ಖ ) ಈ ಪದ್ಮವಾದ ಮೇಲೆ (ಕ) ಪ್ರತಿಯಲ್ಲಿ ವರ್ಷಾಕಾಲದ ವರ್ಣನೆಗೆ ಸೇರಬೇಕಾದ ಒಂಬತ್ತು ಪದ್ಯಗಳಿವೆ. ಅವು ( ಖ ಬ) ಪ್ರತಿಗಳಲ್ಲಿ ಆ ಪ್ರಕರಣದಲ್ಲಿಯೆ ಇರುವುದರಿಂದ ಅವುಗಳನ್ನು ಅಲ್ಲಿಯೇ ಸೇರಿಸಿದೆ.

ದುದು ಬರತೆ[1]ತ್ತು[1] ಬಾಯ್ [2]ನಿಡುಪನಾ[2]ಳ್ದುದು ಸುಯ್ ನಿಮಿರುತ್ತುಮುಣಂ ಪೊ
ಣ್ಮಿದುದು ಪರಿಶ್ರಮಂ ತನುಗೆ ಸಂಗಳಿಸಿತ್ತು ನಿಜಪ್ರಸಂಗದಿಂ ೧೪೧

ಕ್ರಮಸುಸ್ನಾತ [3]ಪ್ರಸಾಸ್ಯ[3] ದ್ವಿಚಕಿಳದಶನಂ ಪಾಟಲಾಶೀತಿಬಿಂದೂ
ದ್ಗಮದಿಂ ಮಂದಾರ್ಕತೇಜೋನಯನರುಚಿ ಸಮುತ್ಪಾತವಾತಂವಿಧೂ[4] [ಸ್ವ
ದ್ರುಮಪಾದಂ][4] ಶಾಲ್ಮಲೀತೂಳಕಪರಿತವಪುಃಕೇಶಜಾಲಂ ನಿದಾಘಾಂ
ತಿಮಕಾಲಂ ವೃದ್ಧನಂ ಪೋಲ್ತುದು ಶಿಥಿಲಜರಾಜೀರ್ಣವಲ್ಲೀಶಿರೋಳಂ (?) ೧೪೨

## ವರ್ಷಾಕಾಲವರ್ಣನಂ

ತರಗೆಲೆ ಕೋಡದತ್ತಿಡಿಯೆ ಧೂಳಿವೊಲಂ ಸಱಿವೀಳಿ ಧೂಳಿಯಿಂ
ಕಱು ಗಿಡುಗಳ್ ಮುಸುಂಕೆ ಮಳಲೊಕ್ಕಿದವೋಲಿರೆ ಬಟ್ಟಗಣ್ಣ ಪಾ
ಸ[5]ಱಿ[5] ಯೆಡೆಗಂಟ[6]ನಿಂದೊ[6]ಡೆಯೆ ತೂರಲನಿಬ್ಬರಗೊಂಬು ಪಾಂಥರ
ಳ್ಕುಱೆ ಬಿರುಗಾಳಿ ಬೀಸಿದುದು [7]ಕೋ[7]ಡೊಳೆ ಪೊಕ್ಕು ನಿದಾಘದಂತ್ಯದೊಳ್ ೧೪೩

ಕೆದರುತ್ತುಂ ಮಣಲಂ ತೆರಳ್ಚಿ [8]ಕೊಳುತುಂ ಭೂರೇಣುವಂ [9]ತುಳ್ಕು[9] ತುಂ
ನದನದ್ಯಚ್ಛಜಳೌಘಮಂ ಮುರಿಯುತುಂ ಭೂಜಂಗಳಂ ನುರ್ಗುತುಂ
ಪೊದರಂ ಸೀಳುತುಮೆಯರ್ದೆ ವಂಶವನಮಂ ಕಾಡಾನೆಯಂ ಪೋಲ್ತು [10]ಬೀ
ಸಿದುದೆತ್ತಂ[10] ಲಯಕಾಲಕಾಲವಿಚಲದ್ಭೀಮಾರುತಂ ಮಾರುತಂ ೧೪೪

(ಕಾವ್ಯಾಲೋಕನಂ ೪೮೯)

ಒದವೊದ ಕಾರೊಳದ್ರಿಗಳ ಬೇಗೆ ತೆರ[11]ಳ್ಚಿದು [12](ದೇಡು)ಮುಂ[12]ಡನಾ
ದುದು ಬಿಸಿಲೇಱಿ ಕಟ್ಟಿದುದು ಸಂಬಳಮಂ ಕಳಹಂಸಮಾಲೆ ಮೆ
ಟ್ಟಿದುದು ತುಡುಂಕಿ ಸೋಗೆ ಮೊಳೆಯೊಳ್ ಮಿಡುಕು[13]ತ್ತೆಳ[13] ಮಿಂಚು ಕೆ[14]ತ್ತಲೆ[14]
ತ್ತಿದುದು ಪಯೋಧರಾವಳಿ ತಳರ್ನಡೆಯಿಟ್ಟುದು ಪಶ್ಚಿಮಾನಿಳಂ ೧೪೫

(ಅನಂತನಾಥಪುರಾಣ ೯-೫)

ವರುಣವಧೂ [15]ರತ[15] ಶ್ವಸಿತಗಂಧವಹಂ ಮಕರೇಶಚಾರುಚಾ
ಮರಮರುತಂ ಜಳೇಶಮಕರೋದ್ಗತಪುಚ್ಛ ಸಮೀರನಂ [16]ದ [16]ನ
ದ್ವಿರದನಕರ್ಣತಾಳಪವಮಾನನಿದೆಂದು ವಿತರ್ಕಿಪನ್ನಮಾ
ಸ್ಫುರಿತದವಾನಳಂ ಸುಳಿದುದೊಯ್ಯನೆ ಪಶ್ಚಿಮದಿಗ್ಭವಾನಿಳಂ ೧೪೬

(ಜಗನ್ನಾಥವಿಜಯಂ ೪-೨)

---

1 ದ್ದು (ಖ ಬ) 2 ನುಡಿಸುವಾ (ಕ) 3 ಪ್ರಸಸ್ಯಾ (ಕ ಬ) 4 ಸ್ವದ್ರುಮ ಮಂದೆಂ (ಕ ಖ ಬ) 5 ರಿ (ಖ ಬ) 6 ನೊಂದೆ ಕ) 7 ಕಾ (ಖ ಬ) 8ಮಳ್ವಿ (ಅ) 9 ಸೂಸು(ಅ) 10 ಪೊಕ್ಕುದು ಬೀಡಂ (ಅ) 11 ಳ್ದಿ (ಅ) 12 ದೆಡಹುಂ (ಅ) ದೆಡೆಮುಂ (ಖ ಬ) 13 ತ್ತಿದೆ (ಅ) 14 ಚ್ಚಲೊ (ಅ) 15 ವರ (ಅ) 16 ಜ (ಅ)

ಮುಗುಳ ತೊಡಂಬೆ ಗಂಟೊಡೆಯ ಮೊಲ್ಲೆಗೆ ಬೆಳ್ಸುಳಿ[1]ಯೊತ್ತಿ[1] ಪುಟ್ಟೆ ಕೀ
ದಗೆ[2]ಗತಿ[2]ಸೊರ್ಕು ಚೇತರಿಸೆ ಚಾದಗೆಗಂ ಚಿರಮಾಗೆ ರಾಗಮಂ
ಚೆಗೆ ಕಿರುವೀಲಿ ಕಣ್ದೆರಿಯೆ ಸೋಗೆಗೆ ತಣ್ಣಸು ಪುಟ್ಟೆ ಬೆಟ್ಟಬೇ
ಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಳಂ ೧೪೭

(ರಾಮಚಂದ್ರ ಚರಿತ ಪುರಾಣ ೭-೧೨೯, ಮಲ್ಲಿನಾಥಪುರಾಣಂ ೮-೭೬)

ಮುತ್ತುದು ನೇಸಱ ತೇಜಂ
ಸತ್ತುದು ದಾವಾಗ್ನಿ ಪಡುವದೆಸೆ ಮಱೆ ಮುಗುಲಂ
ಪೊತ್ತುದು ಕಡ[3]ಲಿನಂ ತಂ[3]ಪಂ
ಪೊತ್ತುದು ಮಧುಕರಕುಲಕ್ಕೆ ಪಶ್ಚಿಮಪವನಂ ೧೪೮

(ಶಬ್ದಮಣಿದರ್ಪಣ ೨೩೬-೨)

ಎೞ್ದುದು ತಣ್ಣೆಲರ್ ವರುಣದಿಙ್ಮುಖದಿಂದದರೊಂದೆ ಕಿಟ್ಟದಿಂ
ಬೞ್ದುದು ತೃಷ್ಣೆಯಿಂದಳಿದ ಚಾತಕಜಾತಕಚಿತ್ತಮೆಕ್ಕೆಯಿಂ
[4](ದಿ)[4]ೞ್ದುದು ಬಟ್ಟೆ ಸಂಬಳಕೆ ಬಾಳಮೃಣಾಳಮನಂಚೆ ತಣ್ಣೆಲರ್
ಬಿೞ್ದುದು ಕೂಡೆ ಧಾತ್ರಿ ಮೃಗಶೀರ್ಷ ವಿಭಾಗಮನರ್ಕನಾಳ್ವುದುಂ ೧೪೯

(ಶಬ್ದಮಣಿದರ್ಪಣ ೨೩೬-೨)

ಮೊದಲಿಡೆ ಕಾಮುರಕಂ ಗಿಳಿಯೆರಂಕೆಯ ಬಣ್ಣದಪುಲ್ಗೊನರ್ ಪೊದ
ೞ್ದುದು ಪೊಲದೊಳ್ ವಿರಾಜಿಸುವ ಮಾಣಿ[5]ಕವಣ್ಣದ ಕೋ[5]ರಕಂಗಳಿಂ
ಪುದಿದೆಸೆದತ್ತು ಸಾಳೆತರು,ಮುತ್ತಿನ ಬಣ್ಣದ ಕುಟ್ಮಳೌಘವಾ
ದುದು ಕುಟಜಂಗಳೊಳ್ ಪವಳವಣ್ಣದ ಪೂಗಳನಾಂತುದರ್ಜನಂ ೧೫೦

ಕೆಂಗೊನರಾಯ್ತು ಸಲ್ಲಕಿ ಕದಂಬಮರಲ್ದುದು ಜಂಬು ದೋರೆವ
ಣ್ಗೊಂಗಲನಾಂತುದತ್ತ [6]ಮಳಕಂ[6] ಪರಲೊತ್ತಿದುದಿತ್ತ ಕೇತಕಂ
ಪೊಂಗಱಿಗಟ್ಟಿ[7]ದತ್ತು ವನಲಕ್ಷ್ಮಿಯ[7] ನೀಕ್ಷಿಸುವಂತಿರಾದುವೆ
ತ್ತಂ ಗಿರಿಕುಂಜದೊಳ್ ಕುಣಿದು [8]ಕೇ[8] ಗುವ ಸೋಗೆಯ ಕಣ್ಣ ಪೀಲಿಗಳ್ ೧೫೧

(ಜಗನ್ನಾಥ ವಿಜಯ. ೪-೬)

ಬೆಟ್ಟದ ತೋಳನಿಂಬರಿದು ಸಾರ್ದುವು ಬೇಡರ ಪಳ್ಳಿ ಕಾಗೆ ಗೂ
ಡಿಟ್ಟುವು ತತ್ತಿಯಿಕ್ಕಿದುವು ಪೋದಗೆ ಮೆಲ್ಲನೆಯಲ್ಲಿ ಹಂಸೆಗಳ್

1 ಪುಟ್ಟಿ (ಅ) 2 ಗೆಳ (ಅ) 3 ವಿನಕಂ (ಖ ಬ) 4 ಪ (ಕ ಖ ಬ)5 ಕಂಗಳಂ ಕಾ ( ಕ ಖ ಬ) 6 ಕತರಂ (ಅ) 7 ತೆಂದುಪಲವೊಯ್ಕೆಯಿ ( ಅ) 8 ಕೂ (ಅ)

ತೊಟ್ಟನೆ ಪಾರಿಪೋದುವು ಜಲಾಶಯದಿಂ ಮರದಿಂ ಮರಕ್ಕೆ ದಿಂ
ಕಿಟ್ಟು ಕಳಾಪಿ ಕೇಗಿದುವು ಚಾದಗಯೇಱಿದುವಭ್ರಮಾರ್ಗಮಂ ೧೫೧

(ಅನಂತ ನಾಥ ಪುರಾಣಂ೯-೬)

ಮುಗಿಲಿದಿರೆಱೆ ಕಾದಲಲರೆಱೆ ಪೊಲಂ ಪಸುರೆರಿ ಕಾಡಮ
ಲ್ಲಿಗೆ ನನೆಯೇಱೆ ಮೊಲ್ಲೆ ನಯವೇಱೆ ಬಿಸಿಲ್ ಕಡುದಣ್ಣಸೇಱೆ ಕೇ
ದಗೆ ಸುಱೆಯೇರಿ ಹಂಸೆ ಭಯವೇಱೆ ನವಿಲ್ ನಲವೇರಿ ಕಾಮಬಾ
ಹುಗೆ [1]ಬಲ[1]ವೇರಿದತ್ತು ವಿರಹಿ ಪ್ರಕರಕ್ಕಳಿಲೇರುತಿರ್ಪಿನಂ ೧೫೨

ಅರಿದಿನಿ [2]ಸುಂ[2] ಬೆಟ್ಟದ [3]ತೋ
ಳ್ಱೆ[3]ಗೊಂಡಿರಲೆಂದು ಭಿಲ್ಲಪಳ್ಳಿಗಳೆಲ್ಲಂ
ತೋಱೆದುವು [4]ತೋಱೆದಡಿಗಳನಾರ್[4]
ತೋಱೆಯದರನುಕೂಲವೃತ್ತಿಗೆಟ್ಟೆಸಗುವರಂ ೧೫೩

(ಜಗನ್ನಾಥ ವಿಜಯಂ ೪-4)

ಘನ[5]ವಜ್ರ[5] ಜ್ವಾಲಧೂಮಾವಳಿಯೊ ಗಗನಗಂಗಾತಟೋದ್ಯತ್ತಮಾಳೀ
ವನಮೋ ವಿದ್ಯುನ್ನಟೀಕರ್ಬುರಜವನಿಕೆಯೋ ಚಾರುಮೇಘಾಗಮಶ್ರೀ
ವನಿತಾಪಿಂಛಾತಪತ್ರಪ್ರಕರಮೊ ವಿಯದುತ್ತುಂಗಮಾತಂಗ[6]ಭೂಷಾ[6]
ಜಿನಪಕ್ಷತ್ರಾಣಮೋ [7]ಪೇಱೆನೆ[7] ನೆಗೆದುದಳಿಶ್ಯಾಮಳಂ ಮೇಘಜಾಳಂ ೧೫೪

(ಜಗನ್ನಾಥವಿಜಯ ೪-೧೦)

ಒಟ್ಟಿದ ವಾರಿದೇರುಗಳವೋಲ್ ಕೆಲವೊಪ್ಪಿರೆ ದೂರಭಾಗದೊಳ್
ಕಟ್ಟಿದ ಗಂಧವಾರಣದವೋಲ್ ಕೆಲವೊಪ್ಪಿರ್ ತಳ್ತೆ ಕರ್ಪೂಡಂ
ಬಟ್ಟೆಸೆದೆತ್ತಿದೋಳಿಗುಡಿವೋಲ್ ಕೆಲವೊಪ್ಪಿರೆ ನೀರದಂಗಳೊಂ
ದಿಟ್ಟಳವೊಪ್ಪಿದತ್ತು ಮಱೆಗಾಲದ ಬೀಡಿನವೋಲ್ ನಭಸ್ಥಳಂ ೧೫೫

(ಚಂದ್ರಪ್ರಭ ಪುರಣಂ ೪-೩೧)

ವರುಣನ ಕೀಲಾರದ ತುಱು
ಖರಕರಕೃತ ನಿರತ [8](ನೀರದಾಂ)[8]ಬರಂವಿಪಿನಾಂ
ಶರಮನಡರ್ದೆಱೆದಪುವೆನೆ
ವರುಣಾಶೆಯಿನಭ್ರಪಥವನೇಱೆದುದಭ್ರಂ ೧೫೬

ಜಳದೌಘಶಲ್ಯಮಧೂಮಪ್ರತತಿ ಚಳತಟಿನ್ಮಾಳಿಕಾಲೋಲಕೀಲಾ
ವಳಿ ಸಂಜಾತೇಂದ್ರ ಗೋಪಪ್ರಸರವಿಸರ ದ ರ್ಚಿಃಕಣಂ ಪಶ್ಚಿಮಾಶಾ

1 ಜಯ (ಅ) 2 ಸಂ (ಅ) 3 ತಾಳ್ಸಿರಿ (ಅ) 4 ತೋರಿದಡಿಗಳಾ (ಕ ಖ ಬ) 5ವಹ್ನಿ (ಅ) 6ರುಕ್ಷಾ (ಕ) ಋಕ್ಷಾ (ಖ ಬ)7 ಮೇಣೆ (ಅ) 8 ನಿರತಾಂ (ಕ ಖ ಬ)

ನಿಳ್[1]ವಾ[1] ತೋಜ್ಜೃಂಭಿತಂ ಬಂದುದು ವಿರಹಿತರುವ್ರಾತಮಂ ಪರ್ವುವುಗ್ರಾ
ನಳನೆಂಬಂತಬ್ಧ ಕಾಲಂ ಸ್ತನಿತಧಗಧಗಧ್ವಾನರೌದ್ರಾಯಮಾಣಂ ೧೫೭

(ಚಂದ್ರ ಪ್ರಭ ಪುರಾಣಂ ೪-೨೯)

ಸ್ತನಿಘನಬೃಂಹಿತಂ ದು
ರ್ದಿನಮದಪೂರಂ ಪಯೋದ[2]ಗಜ[2]ಘಟೆ ಸು[3]ಱಿ[3]ದ
ತ್ತಿನರುಚಿಪಲ್ಲವಕುಳಕಬ
ಳಿನಲೀಲೆಯಿನಂತರಿಕ್ಷಕಕ್ಷ್ಯಾಂತರದೊಳ್ ೧೫೮

(ಚಂದ್ರ ಪ್ರಭ ಪುರಾಣಂ ೪-೩೩)

ಮುಂ ಬಿಸಜೋದ್ಭವಂ ಸಮೆದನಂಬುದಮಂ ಪವಮಾನಧೂಮತೇ
ಜೋಂಬುಗಳಿಂದಮೆಂಬ ನುಡಿ ಸತ್ಯಮದಲ್ಲದೊಡುಂತೆ ಕಾರ ಕಾ
ದಂಬಿನಿ ಮಾೞ್ಕುಮೇ ಬಿರಿಗಂಗಜವಹ್ನಿ ವಿಜೃಂಭಮಂ ವಿಳೋ
ಳಾಂಬಕವಾರಿಯಂ [4]ತನುನಿದಾಘ[4]ಮನುತ್ಕಳಿಕಾಪ್ರಪಂಚಮಂ ೧೫೯

(ಚಂದ್ರ ಪ್ರಭ ಪುರಾಣಂ ೪-೩೪)

ಇಂಬುಗಿಡಿಸಿದುವು ದೆಸೆಗಳ
ನಂಬರಮಂ ಪೀರ್ದು[5]ವಹಿಮ[5] ಹಿಮಕರಕಿರಣಾ
ಡಂಬರಮಂ ನೊಣೆದುವು ಪಿರಿ
ದುಂ ಬೇಸರಿಸಿದುವು ಬಿರಯಿಯಂ ಜಲದಂಗಳ್ ೧೬೦

(ಚಂದ್ರ ಪ್ರಭ ಪುರಾಣ ೪-೩೪)

ನಲ್ಲರನಪ್ಪೆ ಮುಗ್ಧೆಯರು ದುರ್ಭಯಸಂಭ್ರಮದಿಂದೆ ಹಂಸೆಗಳ್
ನಿಲ್ಲದೆ ಪಾಱಿಪೋಗೆ ಕೊಳದಿಂ ನವಿಲ್ ಮೊಱೆಯೆ ಕೇಳುದ ನರ್ತನೋ
ತ್ಫುಲ್ಲತೆಯಂ ನೆಗಳ್ಚಿ ಮೊಳಿಗಿತ್ತು ಮುಗಿಲ್ ಘನಕಾಲಭೂಮಿಭೂ
ವಲ್ಲಭದಿಗ್ಜಯೋದ್ಯಮಮಹೋತ್ಸವದುಂಧುಭಿ ತಾನಿದೆಂಬಿನಂ
ಹರಿಗೋಪಾಲಪದಕ್ಕೆ ತೂರ್ಯಪಟುಘೋಷಂ ಕೇಕಿನಾಟ್ಯಕ್ಕೆ ಬಂ
ಧುರ ಢಕ್ಕಾನಿನದಂ ವಿಯೋಗಿನಿವಹಕ್ಕಂಗೋದ್ಭವಜ್ವಾಲತೋ
ದ್ಧುರನಾದಂ ಕಳಹಂಸೂಯೂಥಗಮನೋದ್ಯೋಗಕ್ಕೆ ಭೇರೀಗಭೀ
ರರವಂ ತಾನೇ[6]ನಿಸಲ್ಕೇ[6] ಮೇಘನಿನದಂ ಪೊಣ್ಮಿತ್ತು ರೋದೋಂತದೊಳ್ ೧೬೧

(ಜಗನ್ನಾಥ ವಿಜಯಂ ೪-೮)

ಪಿಕಮೌನವ್ರತದುಂದುಭಿಧ್ವನಿ ಬಲಾಕಾದೃಶ್ಯಚೂಡೋದಯಾ
ನಕರಾವಂ ಶಿಖಿನೃತ್ಯವಾದ್ಯರುತಿ ಪೋತಕ್ಕುದ್ಭಗಭೋರ್ತ್ಸವೋ

1ಪಾ (ಅ) 2ಘನ (ಕ ಖ ಬ) 3ರಿ (ಖ ಬ) 4 ಹೃದಯ ತಾಪ (ಅ) 5ವಹ್ನಿ (ಖ ಬ) 6ನೆನವ್ಯ (ಅ)

ತ್ಸುಕವಾದಿತ್ರರವಂ ಮರಾಳಗಮನಾತೋದ್ಯಸ್ವನಂ ಚಾತಕೋ
ದಕಕೇಳಿಕೃತತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ ೧೬೨

(ಚಂದ್ರಪ್ರಭ ಪುರಾಣಂ ೪-೩೫)

ರಸನಾಲಂಪಟನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭ
ಕ್ಷಸಮಸ್ತಾಟವಿಭುಂಜಿತೋಗ್ರನೆನಿಪೀ ದಾವಾಗ್ನಿಯುಂ ಕಾಲ್ಗಳಿಂ
ಪೊಸೆವೆಂ ಕಾಳ್ಪೊನಲಿಂ ಪೊರಳ್ಚುವೆನರಣ್ಯಶ್ರೀಯೆ ಕೇಳೆಂದು ಗ
ರ್ಜಿಸಿ ಮೇಘಂ ನುಡಿವಂದದಿಂ ಸ್ತನಿತಘೋಷಂ ಪೊಣ್ಮಿತಂದೆತ್ತಲುಂ ೧೬೩

ವಾದನದಂಡಂ ಕುಡುಮಿಂ
ಚಾದುದು ನೇಣಾದುದಮರಚಾಪಂ ವರದಂ
ಭೋದಮದು ಢಕ್ಕೆಯಾದುದು
ವಾದಕನಾದುದು ನಟತ್ಕಲಾಪಿಗೆ ಗಗನಂ ೧೬೪

ರಾಗದ ಬಳ್ಳಿ ಚಾದಗೆಗೆ ಕಾಂಚಮಚಂಚಲಲಾಸ್ಯ [1]ತರ್ಜನಂ[1]
ಸೋಗೆನವಿಲ್ಗೆ ಮೇಖಲೆ ಘನಾಗಮ ಲಕ್ಷ್ಮಿಗೆ ದೀಪಮಾಲೆ ಜಾ
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ ನಭೋ
ಭಾಗಮನೆಯ್ದೆ ಬಿತ್ತರಿಸಿದತ್ತು ತಟಿಲ್ಲತೆ ಲಾಸ್ಯಲೀಲೆ[2]ಯಿಂ[2] ೧೬೫

(ರಾಮಚಂದ್ರ ಚರಿತಪುರಾಣಂ ೭-೧೪೮; ಮಲ್ಲಿನಾಥ ಪುರಾಣಂ ೮-೮೮)

ಘನಘನಚಾಪದೊಳ್ ಸ್ಫುರಿತ ಮನ್ಮಥರಾಗಸುವರ್ಣ ನೂ
ತನಜಳವಾಹಕೇಶಯುಗಳಂ ನವಚಂಪಕಮಾಲೆ ವಾರಿಭೃ
ಜ್ಜನಪತಿಹಸ್ತ ಖಡ್ಗ ಲತೆ ಮೇಘ[3]ನೃಪೋ[3]ಜ್ವಳದೀಪಮಾಲೆ ತಾ
ನೆನೆ ಕಡುಗಾಡಿಯಿಂದಿಱಿದು ಮಿಂ[4]ಚೆಸೆ[4]ದತ್ತು ನಭೋವಿಭಾಗದೊಳ್ ೧೬೬

ಜಳಮಂ ವಾರಾಶಿಯೊಳ್ ಮೀರ್ಕೆಬೆರಸು ಮೊಗೆತರಲ್ ಮೇಘವಾ ಬಾಳೆಮೀನ್ಗಳ್
ಪೊಳೆದಾಡುತ್ತಿರ್ದುವಾಕಾಶದೊಳೆ [5]ನಲವಿ[5] ಭಿನ್ನಾಂಜನಚ್ಛಾಯೆಯಿಂ ಗೊಂ
ಡಳಿಸಿರ್ದಂಭೋದ[6]ದಿಮದುಚ್ಚಳಿಸಿ[6] ಪೊಳೆವ ವಿದ್ಯುಲ್ಲತಾಜಾಲಮಾಗಳ್
[7]ತ[7]ಳೆದತ್ತಾಶ್ಚರ್ಯಮಂ ಕಣ್ಗೊಲೆ ಬಿಡೆ ಬಿಸಿಲಂ ಕಾ[8]ರಿಂದೊಂದಂ[8]ದದಿಂದ೧೬೭

(ಜಗನ್ನಾಥ ವಿಜಯಂ ೪-೧೫)

ಸಕಲಬ್ದಂಭಸ್ಸಿ ರಾಮೋಚನಸುನಿಶಿತಶಸ್ತ್ರಂ ಪ್ರಯಾಣೋತ್ಕಹಂಸ
ಪ್ರಕರಪ್ರಸ್ಥಾಭೇರೀಕನಕಮಯಕನತ್ಕೋಣಮಾಸಾರಲಕ್ಷ್ಮೀ

1 ಜರ್ಝರಂ (ಖ ಬ) 2 ಯಂ (ಕ) 3 ಗೃಹೋ (ಬ ಖ) 4 ಚಿಸಿ (ಖ ಬ) 5 ನೆನೆವ (ಖ ಬ) 6 ದೊಳ್ ತಾಂ ಬಳಸಿ(ಅ) 7 ಮೊ (ಖ ಬ) 8 ರುತಿರ್ಪೊಂ (ಅ)

ಪ್ರಕಟಾಂಭೋದಾವಳೀವಿಶ್ಲಥಕರಿಭರಸ್ರಂಸಿದಾಮಂ ಚಳಚ್ಚಾ
ತಕರಾಜ್ಯಶ್ರೀಕಟಾಕ್ಷದ್ಯುತಿಲತಿಕೆ ತಟಿನ್ಮಾಲೆ ಚೆಲ್ವಾದುದಾದಂ ೧೭೧

(ಚಂದ್ರಪ್ರಭ ಪುರಾಣಂ ೪-೩೧)

ಗಗನಶ್ರೀಯ ವಿಚಿತ್ರ ವಸ್ತ್ರವಿಲಸತ್ಸಂವ್ಯಾನಮೆಂಬಂತೆ ಕಾ
ರ್ಮುಗಿಲೆಂಬಾನೆಯ ರನ್ನದಗ್ಗವಣೆಯೆಂಬಂತಬ್ಜ ಗರ್ಭಾಂಧಭೂ
ರಿಗೃಹದ್ವಾ[1]ರದ ರತ್ನ[1] ತೋರಣಮಿದೆಂಬಂತಭ್ರದೊಳ್ [2]ನಾ[2] ಡೆ ದಿ
ಟ್ಟಿಗೆ ಚೆಲ್ವಾಯ್ತು ಬಹುಪ್ರಭಾಶಬಳಿತಂ ಗೀರ್ವಾಣಬಾಣಾಸನಂ ೧೭೨

(ಜಗನ್ನಾಥ ವಿಜಯಂ ೪-೧೬)

ನನೆಗೋಲ್ ಕರ್ಬಿನ ಬಿಲ್ ಮದಾಳಿಕುಳಲೇಖಾಮೌರ್ವಿಯೆಂಬರ್ ಮನೋ
ಜನ ಬಿ[3]ಲ್ ಮುಂ[3] ಪುಸಿಯಲ್ತು ಮೂಡುತಿದೆ ನಾನಾವರ್ಣದಿಂ [4]ಮಿಱ್ತು ವೆಂ[4]
ದೆನಸುಂ ಬಾಯ್‌ಬಿಡೆ ಕಾಮುಕಾವಳಿ ಪಯೋಭೃತ್ಕಣ್ವವಕ್ಷಃಸ್ಥಳೀ
ವನಮಾಲಾ [5]ಯತ್ ಮೇಂ ಪೊದಱ್ದಿಸೆದುದೋ ಗೀರ್ವಾಣಬಾಣಾಸನಂ

ಮಾರ್ಮುಗಿಲೊಡ್ಡಿದತ್ತು ತುಱುಗಾರ್ತಿಯ ಕೋಣೆ ಕಡಂಕಿ ಮಿಂಚಿದ
ತ್ತೊರ್ಮೆಯೆ ನಿಂದ ನೀರ್ತೆಗೆದುದೊರ್ಮೆ ಬಿಸಿಲ್ಗೆ ಪೊದಳ್ದುದೋಳಿಯಿಂ
ಘರ್ಮಮರೀಚಿಮಂಡಳತರಂಗಿತ ಮೈವಳಿಯಾಯ್ತು ನೀರ್ಗದಿರ್
ಪೆರ್ಮಳಿಯಾಗದೀಗಳೆನುತಿರ್ದುದು ರಾಗದಿನುರ್ಬಿದಾ ಜನಂ ೧೭೩

ಥೞಥೞಿಸೆ ಮಿಂಚು ಮಿಂಚಿದ
ಬೞಿಯನೆ ದಳದಳಿಸಿ ಮೊೞಗಿ ಮೊಗೆ ಮೊೞಗಿದವಂ
ಬೞಿಯನೆ ಕಡಲಂ ಮೆಲ್ದಗೆ
ದೆೞಲಿಕ್ಕಿದ ತೆಱದಿನೆಱಗಿಕೊಂಡವು ಮುಗಿಲ್ಗಳ್ ೧೭೪

ಮೇ[6]ಲೆಱ್ವ [6]ಮುಗಿಲ [7]ಹೇನ[7]
ಮಾಲೆಗಳಂ ನೆಗೆದು ಕೊರಡುಗೊಂಡವೊಲೆತ್ತಂ
ಸಾಲಿಟ್ಟುವೆರಲವಟ್ಟೆಯೊ
ಳಾಲಿವರಲ್ವೆರಸು ತೋರವನಿ [8]ಮುಂಗಾ[8]ರೊಳ್ ೧೭೫

(ಅನಂತನಾತ ಪುರಾಣಂ೯-೮)

ಉಪಶಾಂತರಜೋವಿಕೃತಿಯ
ನುಪ [9](ಗತ) ಕಾ[9]ಳಿಮಪಯೋಧರಸ್ಮಿತೆಯಂ ಮ

1 ದುದಾರ (ಅ) 2 ನೋ (ಅ) 3 ಲ್ಲಂ (ಅ) 4 ಬಿಲ್ಲುವೆಂ (ಕಖಬ) 5 ಮಯ (ಅ)
6 ಲಲೆವ (ಅ) 7 ಹೊದರಿನ (ಅ) 8 ಕೊಳ್ಗ (ಅ) ತಾ (ಖಬ

ತ್ತುಪಚಿತಜಡವೃತ್ತಿಯನೆ
ಯ್ದೆ ಪೋಲ್ತುದಭ್ರಾಗಮಮಂ ಸಗರ್ಭಾಂಗನಯಂ* ೧೭೬

(ಚಂದ್ರಪ್ರಭ ಪುರಾಣಂ ೪-೪೪)

ವಿಳಸಿತ ಕಂ[1]ದಳಂ[1] ವಿ[2]ನಿಪತತ್ಕ[2]ರಕಂ ಕ್ಷುಭಿತೋರುವಾಹಿನೀ
ಕುಳನಿನದಂ ಗಳಚ್ಛರಸಮಗ್ರಮುದಗ್ರಸುಪರ್ವಚಾಪಮಂ
ಡಳಲಲಿತಾಂಬರಂ ವಿಹರಿದಶ್ವಸಮುತ್ಕರ[3]ಮಂದಗುರ್ವನೇಂ[3]
ತಳೆದುದೊ ಪೋಲ್ತು ಯುದ್ಧ[4]ದ ಸಮ[4]ಕ್ರಮವಂ ಜಲದಾಗಮಕ್ರಮಂ ೧೭೭

(ಚಂದ್ರಪ್ರಭ ಪುರಾಣಂ ೪-೪೪)

ಘನಸಮಯಶಬರ ಕರಗತ
ಕನತ್ತಟಿದ್ದಂಡಪಾತವಿಗಳನ್ನೀಳ
ಸ್ತನಯಿತ್ನುಕುಳತಮಾಳೀ
ವನಪ್ರಸೂನಂಗಳೆನಿಸಿದುವು ಕರಕಂಗಳ್ ೧೭೮

(ಚಂದ್ರ ಪ್ರಭ ಪುರಾಣಂ ೪-೩೭)

ಬಿಳ್ದ ಸಿಡಿಲ್ದು ವಾಲಿವರಲಾಲಿವರಲ್ಗಳ ಪಿಂತೆ ಧಾರೆಗಳ್
ಬಿಳ್ದವು ಧಾರೆಯಂ ಬೆಳಗಿ ತೋರುವವೋಲ್ ಪೊಳಪೇರಿ ಮಿಂಚು ಮಿಂ
ಚೆಳ್ದವು ಮೇಘದೊಳ್ ಮೊಳಗೆ ಮೇಘದ ಸಂದಣೆಯಿಂದೆ ಭೋನು
ತ್ತೆಳ್ದರಿ ಕೊಳ್ವ ಪೆರ್ಮಳಿಯ ಘೋಷವದೇನೆಸೆದತ್ತೊ ಕಾರ್ಮೊಗಂ ೧೭೯

ತೀಡುವ ಪಕ್ಷಿಮಾನಿಳನ ತೀಟ[5]ದಿನು[5]ತ್ಕಟಮಾಗೆ ರಾಮಮೀ
ರ್ಪೋಡಿದ ಚಂಚುವಂ ತೆರಿದೆರಿಂಕೆ ನೆರಲ್ದಿರೆ ಕಂಠನಾಳಮಂ
ನೀಡಿ ವಿಯತ್ತಳಕ್ಕೊಗೆದು ಕಾರ ಮುಗಿಲ್ವನಿಯಂ ಮನಂ ಕುಳಿರ್
ಕೋಡುವಿನಂ ಕರ್ದುಂಕಿ ನಲಿ[6]ವಾರಿದು ವಾರಿದುವಂದು[6] ಜಾತಕಂ* ೧೮೦

(ರಾಮಚಂದ್ರ ಚರಿತ ಪುರಾಣಂ ೭-೧೪೭;ಮಲ್ಲಿನಾಥಪುರಾಣಂ ೮-೮೭)

ಗರಿಗಳ್ ಮಿಳ್ಳಿಸೆ ಗೋಣ್ ಮರಲ್ದು ಮಡಪಿಟ್ಟಂ ಬಿಚೆರ ಚಂಚೂಪುಟಂ
ದೆರಿದಳ್ಕೆತ್ತಿ ದಿರ್ವಾರಿ ಪೀರ್ದು ನಭದೊಳ್ ವಾರ್ಧಾರೆಯಂತೆರಿ ಮೇ
ಮರುಕಂ ಸೊರ್ಕಿನಳುರ್ಕೆಗಾಲಿವರಲಂ ಪೊಯ್ದಣ್ಣೆ ಕಲ್ಲಾಡಲುಂ
ತಿರುಕಲ್ಲಾಡಲದೇ. ತಗುಳ್ದುವೊ ಮನಸ್ಸಂಪ್ರೀತಿಯಿಂಜಾತಕಂ (?) ೧೮೧

(ಅನಂತ ನಾಥ ಪುರಾಣಂ೯-೯)

---

1 ಧರಂ (ಕ ಖ ಬ) 2 ನೀತಿಪಕ್ವ ( ಖ ಬ) 3 ದಂಡುರ್ಬಿಗೇಂ ( ಖ ಬ) 4 ಸಮಯ (ಅ) 5 ದೊಳು (ಅ) 6 ದಾಡಿದು ರಾರಿದುದೊಂದು (ಅ) ಈ ಪದ್ಮವು (ಕ) ಪ್ರತಿಯಲ್ಲಿಲ್ಲ ಈ ಪದ್ಯದಿಂದ ಮುಂದಿನ ಹತ್ತು ಪದ್ಯಗಳು (ಕ) ಪ್ರತಿಯಲ್ಲಿ ಗ್ರೀಷ್ಮವರ್ಣನಾಭಾಗದಲ್ಲಿ ಸೇರಿ ಹೋಗಿವೆ ( ಖ ಬ) ಪ್ರತಿಗಳಲ್ಲಿ ಈ ಪದ್ಯವಿಲ್ಲ.

ಮನದನುರಾಗದಿಂ ನೆಗೆದು ನೀಡಿದ ಕಂಠಮರಲ್ದ ತುಪ್ಪುಳು
ರ್ಬನಿಮಿಷಮಾದ ಕಣ್ ತೆಱೆದ ಚಂಚು ವಿಜೃಂಭಿಪೆರಂಕೆ ರಂಜಿಸಿ
ತ್ತೆನೆ ನಲವೇಱೆ ತೋರವನಿ ತಣ್ಬನಿ ಮುಂಬನಿಯೆಂಬ ಕಾರ್ಮುಗಿ
ಲ್ವನಿಯನಲಂಪಿನಿಂದುಮಿದಿರ್ಗೊಂಡು ಕರ್ದುಂಕಿದುದ್ಧ ಜಾತಕಂ ೧೮೨

(ಜಗನ್ನಾಥ ವಿಜಯಂ೪-೧೭)

ಇದಿರ್ಗೊಂಡಾಯ್ಕುಳಿಗೊಂಡು ಕೊರ್ಬಿದ ನವಾಂಬೂದ್ಭಿಂದುವಂ ನುಂಗಿ ಷೆ
ರ್ಚಿದಲಂಪಿಂ ಜಲಧಾರೆಯಂ ಕರ್ದುಕಿದತ್ತೆಯ್ತಂದು ಮುಂಡಾಡಿದತ್ತೊ
ದೆದತ್ತೀಡಿರಿಂದತ್ತು ಚಂಚುಪುಟದಿಂ ಪೊಯ್ದತ್ತು ಪಕ್ಷಾಗ್ರದಿಂ
ಬಿದಿರ್ದತ್ತೊಕುಳಿಯಾಡಿದತ್ತು ನಿಜತೃಷ್ಣಾಘಾತಕಂ ಚಾತಕಂ ೧೮೩

ಜಳಧರಮುಕ್ತನವ್ಯ ಜಳಬಿಂದುಗಳಂ ನೆ[1]ಗೆ[1]ದಾಯ್ದು ನುಂಗಿ ಕ
ಣ್ಮಲರ್ಗೊಳೊಳೋ[2]ವಿ[2] ಕೊಂಡು ಕುಣಿದಾಡಿದುದುಜ್ವಲಮಪ್ಪ ಧಾರೆಯೊಳ್
ಗಿಲಿಗಿಲಿಗಂಬವಾಡಿದುದೆರಂಕೆಗಳಂ ಕೆದಱೆತ್ತು ಮುದ್ದಿನಿಂ
ಕೆಲಕೆ ನಿರಾಕುಳಂ ತೆಗೆದುದಪ್ಪಿದುದೊಪ್ಪಿದುದೊಂದು ಜಾತಕಂ ೧೮೪

ವಸುಧಾವಲ್ಲಭೆ ಮೇಘಕಾಲವಿಟನೊಳ್ ಸಂಭೋಗಮಂ ಮಾಡೆ ಬಂ
ಣ್ಣಸರಂ ಪೋರ್ಕುಳಿಯಿಂದಲೇ ಪಱಿದು ಕಣ್ಗೆಂಬಾದುವೆಂಬತದೇ
ಪೊಸಮುತ್ತುಂ ಕಿಸುಗಲ್ಗಳುಂ ಕೆದಱಿ ಕಣ್ಗೆಂಬಾದುವೆಂಬತದೇ
ನೊಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ ೧೮೫

(ರಾಮಚಂದ್ರ ಚರಿತಪುರಾಣಂ ೭-೧೪೬ಮಲ್ಲಿನಾಥ ಪುರಾಣಂ೮-೮೬)

ವಾಸವಚಾಪಮೆಂಬ ಮಣಿಮಂಟಪದೊಳ್ ಮೊಱಗೆಂಬ ವಾದ್ಯಮಂ
ಗೋಸನೆ ಮೇಘಮೆಂಬ ತೆರೆಯಿಂದೆ ತಟಿನ್ನಟಿ ಬಂದು ನಾಟ್ಯವಿ
ನ್ಯಾಸದೆ ಕೊಂಕಿ ನಿಂದು ಕುಸುಮಾಂಜಳಿಯಂ ಕುಡೆ ಮುತ್ತು ಮಾಣಿಕಂ
ಸೂಸಿದುವೆಂಬಿನಂ ಪರೆದುವಾಲಿವರಲ್ಗಳುಮಿಂದ್ರಗೋಪಮುಂ ೧೮೬

(ಅನಂತ ನಾಥ ಪುರಾಣಂ೯-೧೨)

ಅಂಬರದ ನಡೆಮುಗಿಲ್ ದಾ
ಳಿಂಬದ ಬಿಡುವಣ್ ನಕಾಯಚಿತ್ತಂ ಸಾರ್ಚಿ
ತ್ತೆಂಬಂತೆ ಬಲಾಹಕದಿಂ
ದಂ ಬಿಟ್ಟಿಪುವಿಂದ್ರಗೋಪಮಾಲಿವರಲ್ಗಳ್ ೧೮೭

ಉಗುಱುತ್ತು ಸಿಡಿಲೆಂಬ ತೋರಗಿಡಿಯಂ ಕಾಲೂಱಿ ಭೂಭಾಗದೊಳ್
ಗಗನಾಭೋಗಮನೆಯ್ದಿ ನೀಳ್ದ ಘನವೇಣೀ ಬಂಧಮಂ ಬಿರ್ಚಿ ಮಿಂ

---

1 ನೆ(ಗ ಘ) 2 ತ್ತಿ (ಗ ಘ)

ಚುಗಳೆಂಬುಳ್ಕುವ ದಾಡೆಗಳ್ ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ
ಸಗೆಯಂ ಬೆರ್ಚಿಸಿ ಗರ್ಜಿಸುತ್ತುಮೊಗೆದಂ ಕಾರೆಂಬ ಕಾಳಾಸುರಂ ೧೮೮

(ರಾಮಚಂದ್ರ ಚರಿತ ಪುರಾಣಂ ೭-೧೫೨; ಮಲ್ಲಿನಾಥ ಪುರಾಣಂ ೮-೯೪)

ಎಳಮಿಂಚುಂ ತಳೆಯಿಕ್ಕಿ ಚಾಮೆಗಳಂ ಬಿಟ್ಟಾಡಿ ಬಲ್ಗೆಚ್ಚಲಿ
ಟ್ಟಳಿನೀಳಾಂಬುದದಿಂ ಬೆಳಲ್ದ ಗಗನ ಶ್ರೀಧೇನುವಂ ಕೋಮಳಾ
ಮಳದೀರ್ಘಾಮೃತಧಾರೆಗಳ್ ಸುರಿಯೆ ಭೋರ್ ಬೋರೆಂಬಿನಂ ಶಕ್ರ ಚಾ
ಪಲತಾದಾಮಕದಿಂದೆ ಕಟ್ಟಿ ಕಱೆದಂ ಕಾರೆಂಬ ಗೋಪಾಲಕಂ ೧೮೯

(ಅರ್ಧನೇಮಿಪುರಾಣಂ ೮-೩)

ನವನೀಳಾಂಭೋದವಂಭೋದದಿನೊಱಗುವ ಧಾರಾಳಿ ಧಾರಾಳಿಗಳ್ ಸೂ
ಸುವಿನಂ ತಳ್ಪೊಯ್ವ ಜಂಝಾನಿಳನನಿಳನಿನಾಮೋದಮಂ ಪೆಱೆ ಪೂವೇ
ಱುವ ಕುಂದಂ ಕುಂದದೊಳ್ ತಳ್ತಳಿಗಳಳಿಗಳಂ ಪಣ್ಗಳಿಂಗೆಲ್ದ ಜಂಬೂ
ನಿವಹಂ ಚೆಲ್ವಾಗೆ ಚೆಲ್ವಾದುದು ಚಟುಲತಟಿಜ್ಜಾಲವಂಭೋದ [1]ಕಾಲಂ[1] ೧೯೦

(ಜಗನ್ನಾಥ ವಿಜಯಂ ೪-೨೭)

ನೆರೆದ ಮುಗಿಲ್ ಕಲಂಕುವುದನೀಕ್ಷಿಸಿ ತನ್ನ ಮನಂ ಕಲಂಕಿ ಕ
ರ್ಗಿರೆ ಮಱೆದುಂಬಿವಿಂಡನೊಳಕೊಂಡಿರುಳೊಳ್ ಮುಗಿದಿರ್ದ ಪಾಂಡುಪಂ
ಕರುಹದ ಭೃಂಗಿಯಂ ತಳೆದು ವಿಸ್ಮಿತಮಾನಸರಾಗಿ ಮಾನಸರ್
ಪರಿಕಿಸೆ ಮಾನಸಕ್ಕೆ ನಡೆಗೊಂಡುದು ಕೂಡೆ ಮರಾಳಮಂಡಲಂ ೧೯೧

(ಜಗನ್ನಾಥ ವಿಜಯಂ ೪-೯)

ವಸುಧಾಚಕ್ರಕ್ಕೆ ಕಾಳಾಯಸಗೃಹ [2]ವಿಲಸಂ[2] ಚಂದ್ರಬಿಂಬಕ್ಕೆ ರಾಹು
ಗ್ರಸನಂ ಚಂಡಾಂಶುಬಿಂಬಕ್ಕೆ [3]ಸಮಯ[3] ರಜನೀಪ್ರೋದ್ಗಮಂ ವಜ್ರವಹ್ನಿ
ಪ್ರಸರಕ್ಕುದ್ದಾಮಧೂಮೋದಯಮಖಿಳವಿಯೋಗಾತುರರ್ಗಂಧಕಾರೋ
ಲ್ಲಸನಂ ತಾನೆಂಬಿನಂ ಬಂದುದು ಬಹುಳ ತಟಿಜ್ವಾಲಮಂಭೋದಕಾಲಂ ೧೯೨

(ಕಾದಂಬರಿ ಉ. ಭಾ. ೫೨೯)

ತಿರುವಂ ಮುಪ್ಪುರಿಗೊಂಡು ಮುಳ್ಳಿಸುವ ಮಿಂಚಿಂ ಮಾಡಿ ನೀಡುಂ ಭಯಂ
ಕರಮಾಗೇಱಿಸಿಕೊಂಡು ಶಕ್ರಧನುವಂ ಧಾರಶರಾಸಾರಮಂ
ಸುರಿಯುತ್ತುಂ ಘನಘೋಷಗರ್ಘರತರಪ್ರಧ್ವಾನದಿಂದಾರ್ದು ಪಾ
ರ್ದಿರ[4]ದುದ್ದಾಮ[4] ನಿದಾಘಮಂ ಬೆದಱೆ ಬೆಂಕೊಂಡತ್ತು ಮೇಘಾಗಮಂ೧೯೩

(ಕಾದಂಬರಿ ಉ. ಭಾ.೫೫೦)

ಧರೆಯೊಳ್ ಶಾಲೂರಸಂಘಂ ಪವನಪಥದೊಳಂಭೋಧರಾನೀಕವಾಶಾಂ
ತರದೊಳ್ ಜಂಝಾಸಮೀರಂ ವನಸಮುದಯದೊಳ್ ಕೇಕಿಸಂಘಾತಮುರ್ವೀ

1 ಜಾಲಂ (ಕಖಘ) 2 ವರಣಂ (ಅ) 3 ವಮೆಯ (ಅ) 4 ದುಂಗಾಹ (ಖಬ)

ಧರ [1]ವಪ್ರ[1] ಪ್ರಾಂತದೊಳ್ ನಿರ್ಝರತತಿ ತಟಿನೀವ್ಯೂಹದೊಳ್ ವಾರಿಪೂರಂ
ವಿರಹಿವ್ರಾತಕ್ಕಗುರ್ವಂದೊಡನೊಡನನಿತುಂ ಗರ್ಜಿಸುತ್ತಿರ್ದುದೆತ್ತಂ ೧೯೪
(ಕಾದಂಬರಿ ಉ. ಭಾ,೫೩೨)

ಸ್ಫುರಿತ ತಟಿತ್ಪ್ರಭಾಪ್ರತತಿ ಕುತ್ತಿಲೆಯಂಸುರಗೋಪಕಾಂತಿ ಪಾಂ
ಡುರತೆಯನಂಬುವಾಹತತಿ ಶೋಷಣಮಂ ಘನವಾರಿಧಾರೆ ನಿ
ರ್ಝರ ಪರಿ[2]ತೋದ[2]ಮಂ ಕುಟಜಕುಂದ ನವೋದ್ಗಮ [3]ರಾಜಿ[3]ರಾಗಮಂ
ವಿರಹಿಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ೧೯೫
(ಕಾದಂಬರಿ ಉ. ಭಾ. ೫೩೪)

ಪಸುರ್ವುಲ್ಲಂ ಮೇದು ಸಂದೊಂದೆಡೆಯೊಳಮೊಡಲಿಂಬಿಲ್ಲೆನಲ್ ಕೊರ್ವಿ ಕೆಚ್ಚಲ್
ಕುಸಿವನ್ನಂ ಬೀಗಿ ಪಾಲಂಬಿರಿವಿಡೆ ಮೊಲೆಯಿಂ ವತ್ಸಪೀತಾವಶೇಷಂ
ಪೊಸಗಾರೊಳ್ ತಾಱಲೊಳ್ [4]ಕಣ್ಮಲರ್ ಮುಗುಳ್ದಿರೆ[4] ಸೃಕ್ವಂಗಳಿಂ ಸೊಸೆ ಫೇನ
ಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದಮಾನಂದದಿಂದಂ ೧೯೬
(ರಾಮಚಂದ್ರ ಚರಿತ ಪುರಾನಂ ೭-೫೭; ಮಲ್ಲಿನಾಥ ಪುರಾಣಂ ೮-೯೯)

ಬಯಲೊಳ್ ಪರ್ವುಗೆದೋಱೆ [5]ಮುಂಬಸ್[5]ಲೆಯೊಳ್ [6]ಮೆಲ್ಪ್ವೇ[6]ಱೆ ನೀರ್ದಾಣದೊಳ್
ನಯಮಂ ಬೀಱೆ ಮಹೀಧ್ರದೊಳ್ ಮಸಕಮಂ ಕೈಕೊಂಡು ಶಾಖಾಸಮು
ಚ್ಚಯದೊಳ್ ಸಂದಣಿಗೊಂಡು ತಾಱವನದೊಳ್ ಕಾರ್ಕಶ್ಯಮಂ ಕೂಡಿಕೊಂ
ಡು ಯಥಾ [7]ಧಾ[7] ರನಿಪಾತಮುಣ್ಯಿದ್ದುದು ಮೇಘೋನ್ಮುಕ್ತಧಾರಾರವಂ ೧೯೭
(ಕಾದಂಬರಿ, ಉ. ಭಾ. ೫೩೩)

ಬಲ್ಸರಿ ಬಿಱುಸರಿ ಪೆರ್ಮಱೆ
ಮೆಲ್ಸರಿ ತುಂತುಱ್ತುಷಾರಮಿಡುಕುಂಬನಿ ತಂ
ದಲ್ಸೋನೆ ನೆಟ್ಟ ಬಡಪಮೆ
ನಲ್ ಸುರಿದುವು ಬಿಡದೆ ಮುಗಿಲ್ಗಳಿರುಳಂ ಪಗಲುಂ ೧೯೮
(ಜಗನ್ನಾಥ ವಿಜಯಂ ೪-೩೧)

ಪರಿವ ಮುಗಿಲ್ ಪಳಂಚೆ ಖಚರೀಚಯಸ್ತನತಾರಹಾರವ
ಲ್ಲರಿ ಪಱಿಯಲ್ ಪೊದಱ್ದು ಬಿಡುಮುತ್ತು ಘನೋಪಲದೊಂದು ರೂಪದಿಂ
ಸುರಿಯಲನಂತರಂ ಬಱಿಯದಾರಮೆಱಲಲ್ದಪುದೆಂಬ ಚೆಲ್ವನಾ
ವರಿಸಿದುವಂದು ಸಂದಣಿಸಿ ನೀಳ್ದ ಪಯೋಧರವರಿಧಾರೆಗಳ್ ೧೯೯
(ಜಗನ್ನಾಥ ವಿಜಯಂ ೪-೩೧)

---

1 ಚಕ್ರ (ಅ) 2 ತಾಪ (ಅ) 3 ವಾಟಿ (ಅ) 4 ಕಣ್ಣರೆ ಮುಗಿದಿರೆ (ಅ) 5 ಸುಣ್ಬಸ (ಅ) 6 ಮೆಯ್ದೋ (ಅ) 7 ಸಾ (ಅ)

ಪುರಮಂತರ್ದ್ವೀಪಮೆಂಬಂತಿರೆ ವಿಪಿನಚರಾನೇಕಪಾನೀಕಮಂಭಃ
ಕರಿಯೂಥಂ ತನಿದೆಂಬಂತಿರೆ ನಗನಿಕರಂ ಪಕ್ಷಕುತ್ಕೀಳಮೆಂಬಂ
ತಿರೆ ಮತ್ತಂ ಲೋಕಮೇಕಾರ್ಣವಮೆನಿಸಿದುದೆಂಬಂತಿರೆತ್ತೆತ್ತಲುಂ ಕಾ
ಬ್ಬಿರಮಾದಂ ಕೊರ್ವಿ ಬಿರ್ದಂ ಕಱಿದುದು ಬಹಳಾಸಾರಮಂ ನೀರದೌಘಂ೨೦೦

(ಚಂದ್ರಪ್ರಭ ಪುರಾಣಂ ೪-೪೧)

ಒಱ ಒಱನಾಗಿ ತಾಳಿಸಿದುದುರ್ವರೆಯಂ ರವಿ ಸುಟ್ಟನೆಮ್ಮನಿಂ
ತಱಗುಲಿಯೆಂದು ವಾರಿದಕೆ ಮುಟ್ಟಿಸಿ ಪುಯ್ಯಲನಿಕ್ಕುವಂದದಿಂ
ಟಱ ಟಱ ಱೊಂಕು ಱೊಕುಟ ಟಱಟ್ಟಱ ಱಟ್ಟ ಱಯೆಂದುಮೆತ್ತಲುಂ
ಕೆಱೆಕೆಱೆ ಬಾವಿ ಬಾವಿ ತೊಱೆಪೆರ್ದೊಱೆದಪ್ಪದೆ ದರ್ದುರವ್ರಜಂ ೨೦೧

(ಅನಂತ ನಾಥ ಪುರಾಣಂ೯-೧೨)

ಅಡರ್ದೊರ್ಖಿದೊಂದಱ ಬೆನ್ನಂ
ಪಡಿಮೊಗದಿಂ ಪತ್ತಿಕೊಂಡು ವಿಷಯಾತುರದಿಂ
ಗಡರ್ಗಬಕು ಗಬಕುಱಿಹಕೆಂ
ದೊಡನೆಂದುವು ಕಾರಗಪ್ಪೆ ಕೆಱೆಗಳ ತಡಿಯಳ್ ೨೦೨

(ಕಾವ್ಯ ಸಾರಂ ೩೨-೮೩೬)

ಮೊಲ್ಲೆ ಮುಗುಳ್ತುದಂದು ಗಿರಿಮಲ್ಲಿಗೆ ಮೆಲ್ಲನರಲ್ದುದಂದು ಕಂ
ಕೆಲ್ಲಿ ಪಸುರ್ತುದಂದು ಬಿದಿರೊಳ್ ಕುಡಿ ಮೂಡಿದುವಂದು ಕೆಂದಳಿರ್
ಸಲ್ಲಕಿಗದುದಂದು ರಸವೇಱಿದ ನೇಱಿಲ ದೋರೆವಣ್ಗಳಂ
ತಲ್ಲುಗುತಂದುವಂದು ತಲೆದೋಱಿದುವಂದು ಶಿಲೀಂಧ್ರಕಂದಳಂ ೨೦೩

ತಿರುವಿಲ್ಲದ ಸುರಧನುವಂ
ಸುರಭಿಶರಂ ಪಿಡಿದು ಗೆಲ್ದು ಭೂಪರ ಕೊಡೆಯಂ
ಪಿರಿದಿನಿತೆಂದುಂ ರತಿಪತಿ
ವಿರಚಿಸಿದಂತಿರ್ದುವೆಬ್ದು ಕಳ್ಳನ ಕೊಡೆಗಳ್ ೨೦೪

ಹಿಮರೋಚಿಃಕಳಿಕಾಕದಂಬಕಮನಿಂಬಿಂ ತಿರ್ದಿ ಮೇಳೈಸಿ ಕುಂ
ಕುಮದಿಂ ಭಾವಿಸಿ ಚಂದನಾಂಬುಗಳ ನೀರಂ ಪೊಯ್ದು ಹಾರೀತರ
ತ್ನಮ [1]ಯೀ ಶು[1]ಕ್ತಿಯೊಳುತ್ತಿ ಬಯ್ತನಜನೆಂಬಂತಾಯ್ತು ಹೊತೇಱ್ಗ[2]ಯಿಂ[2]
ಸುಮನಸ್ಸಾಯಕ[3]ಶಸ್ತ್ರನಾಭರಣ[3]ಮಾ[4]ಸಂ[4]ಕೇತಕಂ ಕೇತಕಂ ೨೦೫

(ಅನಂತ ನಾಥ ಪುರಾಣಂ೯-೧೪)

ಕುಸುಮಾಸ್ತ್ರ ಪ್ರಥಿತಾಜ್ಞೆಯಂ ತಲೆಯೊಳಾಂಪಂ ತನ್ನ [5](ನಾ)[5] ರಿಂತಿದಂ
ಬಿಸುಟಂ ಬೂದಿಯ ಜೋಗಿ ಭೂತಗಣನಾಥಂ ಚರ್ಮವಾಸಂ ಕಪ

1 ಯಾಸೂ (ಖ ಬ) 2 ಯೊಳ್ (ಅ) 3 ನಸ್ತ್ರ ಸೌರಭರ (ಅ) 4 ಸಾ (ಅ) 5 ಡಾ ( ಕ ಖ ಬ)

ರ್ದಿ ಸಮಂತೆಂದು ಮಧುಪ್ರಮತ್ತತೆ ಕರಂ ತಳ್ಪೊಯ್ವಿನಂ ಬೈದು ಪಾ
ಡಿಸುವಂತಿರ್ದುದು ಬಂದ ಕೇದಗೆ ನದದ್ಭೃಂಗಾಳೊಯಿಂ ಶೂಲಿಯಂ ೨೦೬

ಎಱಗದೆ ತಮ್ಮೊಳ್ ಮಧಿಕರ
ನೆಱಗಿರೆ ಕೇದಗೆಯೊಳೆಯ್ದೆ ಕಂಬನಿವಱಿಯಂ
ಕಱಿವಂತಿರೆ ಕಱಿವೂಗಳ್
ನೆಱಿ ಬೀತುವು ಸುರಗಿ ಹೊನ್ನೆ ಮಲ್ಲಿಗೆ ಬನದೊಳ್ ೨೦೭

(ಜಗನ್ನಾಥ ವಿಜಯಂ ೪-೪೫)

ಬಡಪಂ ಬೆಂಬತ್ತೆ ಮೇಪಂ[1]ತೊ[1]ಱಿದು ಬಿಡದೊಡಲ್ ಕೂಡಿ ತನ್ನಿಚ್ಚೆಗೆ[2]ಟ್ಬೊ
ಳ್ದೊ[2]ಡೆಯೊಳ್ ಬೆಚ್ಚಂತೆ ಬಾಲಂ ನಿಲೆ ನ[3]ವಿರೊ[3]ಡೆದುರ್ವೆಬ್ದು ಬೆಂಡಾಗಿ ಕಾಲೊಳ್
ನಡುಕಂ ಮೈವರ್ಚೆ ಗಂಟಲ್ ಕುಸಿದು ಕಿವಿಯೆಱಲ್ತಂದು ನಿಂದಿರ್ದುದೋರೊಂ
ದೆಡೆಯೊಳ್[4]ನಾನಲ್ಗ[4]ಳೊತ್ತಂಬಿಡಿದು ಮೃಗಮೃಗೀವೃಂದಮೋರಂದದಿಂದಂ ೨೦೮

(ಚಂದ್ರ ಪ್ರಭ ಪುರಾಣಂ ೪-೪೭)

ಹೆಱವುಗೊಳಿಸಿತ್ತು ಜನಮಂ
ಮೞೆಗಾಲಂ ತೀವ್ರ ಪವನನಿಂ ದುರ್ದಿನದಿಂ
ಮೊಱಗಿಂ ಮಿಂಚಿಂ ಸಿಡಿಲಿಂ
ಮೞೆಯಿಂ ದೆಸೆ ದೆಸೆಪರಿವ ಪೊನಲಿಂ ಕೆಸಱಿ ೨೦೯

ಇನನಿದಿರೇಱ್ವ ಕಾರ್ಮುಗಿಲ ಬಾಧೆಗೆ ಬೞಿನೊ ತಳ್ತ ಬಳ್ಳಿಮಿಂ
ಚಿನ ಬಲೆಯಲ್ಲಿ ಸಿಲ್ಕಿದನೊ ಪೊಯ್ವ ಸಿಡಿಲ್ಗೊಳಗಾಗಿ ನಿಂದನೋ
ಘನಜಲಕಧಾರೆಯೊಳ್ ಕರಗಿಪೋದನೋ ತನ್ನನೆ ಕಾಣನೆಂದು ಪ
ದ್ಮಿನಿ ನಲವೋಡಿ ತನ್ಮಧುಕರಧ್ವನಿಯಿಂದ ಪಲುಲಿ ಪಾಡಿದಳ್ ೨೧೦

(ಅನಂತ ನಾಥ ಪುರಾಣಂ೯-೧೫)

ಅವಿ[5]ಶಾಲಾಂ[5] ಬರವಪ್ರಸನ್ನ ದಿವಸ್ಪಷ್ಟಾಧ್ವವಸ್ವಚ್ಛತೋ
ಯವನು ದ್ಯೋಗಜನೌಘವಸ್ತದವವಸ್ಮೇರಾಬ್ಜವಶ್ಲಕ್ಷ್ಣ ಕೈ
ರವವಕ್ರೀಡಿಹಂಸವಸ್ಫುರಿತ ಚಂದ್ರಾದಿತ್ಯವಶ್ಲಿಷ್ಟಕೋ
ಕವಯೂನಾಧ್ವಗವಸ್ವರಾನ್ಯಭೃತವಂದೊಪ್ಪಿರ್ದುದಭ್ರಾಗಮಂ ೨೧೧

(ಜಗನ್ನಾಥ ವಿಜಯಂ ೪-೨೬)

ಕೆಸಱೊಳ್ ಜಾಱುವ ಜಾಱೆ ಬೀೞ್ವ ಮೞೆಯೊಳ್ ಮೈನಾಂಬ ನಾಂದೊಚ್ಚತಂ
ಬಸಿಯುತ್ತಿರ್ಪ ಜನಂಗಳಂ ಸುರತಲೀಲಾಗೇಹನಿರ್ವ್ಯೂಹ[6]ದು[6]

1 ಮೆ (ಅ) 2 ಟ್ಟಿರ್ದೆ ( ಕ ಖ ಬ) 3 ಲಿವೊ ( ಕ ಖ ಬ) 4 ತಾ=ಲ್ಗ (ಅ) 5 ಳಾಸಾಂ ( ಖ ಬ) 6 ಮ ( ಕ ಖ ಬ)

[1]ದ್ದೆಸದೊಳ್ ತಟ್ಕಿಸಿ[1] ಸಂತಮಿರ್ದಿನಿಯರೋರೊರ್ವರ್ಗೆ [2]ಕಣ್ಣೆತ್ತಿ[2] ತೋ
ಱಿಸಖೀಸಂಗ [3]ತ[3] ಹಾಸ್ಯದಿಂ ನಲಿಯೆ ರಯ್ಯಂ ತತ್ಪಯೋದಾಗಮಂ ೨೧೨

ಪರೆದ ಕಚಂ ಮುಗಿಲ್ ಕರತಳಾಹತಿಯಿಂ ಪಱಿದೊಕ್ಕ ಮೌಕ್ತಿಕಾ
ಭರಣದ ಮುತ್ತು[4] ಮಾ[4] ಲಿವರಲಾ ಸುಗಳಧ್ವನಿ ಮೇಘನಿಸ್ವನಂ
ಸುರಿವ ಬೆಮರ್ ತಗುಳ್ವ ಮಱಿ ಕಾಮರಸಂ ಪೊನಲಾಗೆ ಕಾದಲರ್
ನೆರೆವೆಡೆಯೊಳ್ ಮನೋಭವನ [5]ಸೃ[5]ಷ್ಟಿ ವೊಲಾದದೊಂದು ಕಾರ್ಮೊಗಂ೨೧೩

ಬಂದಪೆನೆಂದು ಪೋದನಿನಿಯಂ ಜಲದಾಗಮನಕ್ಕೆ ಕಾರ್ಮುಗಿಲ್
ಬಂದುದು ಶಕ್ರ ಚಾಪಲತೆ ಬಂದುದುಪೆರ್ಚಿದ ಸೋಗೆಯಿಂಚರಂ
ಬಂದುದು ಚೆಲ್ವುವೆತ್ತು ನಭದೊಳ್ಪೊಳೆದೊಪ್ಪುವ ಬಳ್ಳಿ ಮಿಂಚು ತಾಂ
ಬಂದುದು ಬಂದನಿಲ್ಲ ಪತಿಯೆಂದು ಲತಾಂಗಿ ಪಲುಂಬಿ ಪಾಡಿದಳ್ ೨೧೪

ಇನಿಯಂ ಬಾರದೆ ಮಾಣ್ದ ನಿನ್ನೆವರನಿನ್ನಿಂ ಕಾರಿರುಳ್ ಪೋಗಿ ಕಾ
ಮನ ಸಾಮ್ರಾಜ್ಯವನಟ್ಟಿದಪ್ಪ ಮಗಳೇ ಕಾಱ್ಪೂರದೊಳ್ ಕುಂಗೆ ಮಿಂ
ಚಿನ ಕಣ್ಣೆ ಱಱಿದಾಗದೊರ್ಮಿಡಿಯೆ ಭಿನ್ನಂ ಚಾಪವೃತ್ತಸ್ತನಂ
ಸ್ತನಿತಕ್ಕೊಡ್ಡಿಸಲಾರ್ಪವೇ ಮಱಿಯೊಳೇಱುಂಜವ್ವನಂ ನಾನದೇ ೨೧೫

ಬಱಸಿಡಿಲೇಱ್ಗಿ ಸುತ್ತಿಟಿದ ಕಟ್ಟಲೆ ಕಾರ್ಮುಗಿಲೊಡ್ಡು ಬಂದುಬಂ
ದೆಱಗುವ ಬಲ್ಲಿತಪ್ಪ ಸರಿ ಕಂಗಳೊಳಣ್ಮುವ ಮಿಂಚು ಮಾಣದ
ಳ್ಕುಱಿ ಗಜಱುತ್ತಮಿರ್ಪ ಘನಗರ್ಜನೆಯೆಂಬಿವು ಕಾಶರತ್ವಮಂ
ಮಱಿಯಿಸಲೆಂತುಮಾಱವು ನಿಜೇಶ್ವರನಲ್ಲಿಗೆ ಪೋಪ ನಲ್ಲಳಾ ೨೧೬

(ಶೃಂಗಾರ ರತ್ನಾಕರಂ ೩-೬೧)

ತಳದಾರ್ತ್ತಾಲಯದಿಂದಿರುಳ್ ಸುಱಿವ ಜಾರಸ್ತ್ರೀಯ ವಕ್ತ್ರೇಂದುವಂ
ಚಳವಿದ್ಯುನ್ನಯನಾವಲೋಕ [6]ನದೆ[6] ಕಂಡನ್ಯಾಯಮಾಯ್ತೀ ವಿಯ
ತ್ತಳ ಚೂಡಾಮಣಿ ಚಂದ್ರ [7]ನೇಂ[7] ಕಱಿದ[8] ನೀ[8] ವರ್ಷಾಂಬುವಂ ಕೂಡೆ ಭೂ
ವಳಯಕ್ಕೆಂ [9]ದುಲಿ[9]ವಂತದೇಂ ಮೊಱಗಿತೋ ಮೇಘಂ ನಿಶೀಥಂಗಳೊಳ್೨೧೭

(ಜಗನ್ನಾಥ ವಿಜಯಂ ೪-೨೮)

ಭವಲಾಲಾಟ ವಿಲೋಚನಾಗ್ನಿ ಶಿಖೆಯಿಂ ಬೆಂದಳ್ಕಿ ಮತ್ತಂ ಮನೋ
ಭವನೆಚ್ಚಿತ್ತೊಡೆ ಕಾಮಕಾಂತೆ ಬಱಿಯಂ ತನ್ನಿಚ್ಚೆಯಿಂ ಮೆಚ್ಚಿ ಬ
ಣ್ಣವುರಂ ತೀವಿದ ಮಾಣ್ಕೆಯಾಯ್ತು ನ[10]ವಿಲಿಂ[10] [11]ತಂದಲ್ಗಳಿಂ[11]ದಿಂದ್ರಗೋ
ಪವಿಳಾಸಂಗಳಿನಾಲಿಕಲ್ಲ ಪರ [12]ಪಿಂ[12] ಕಾರೊಳ್ ಮಹೀಮಂಡಳಂ ೨೧೮

(ಪಂಪಭಾರತಂ ೪-೨೮)

1 ದ್ವೆಸದೊರಳ್ಚೆಸಿ (ಕ) ದ್ವೆಸದೊತ್ತಳ್ಕಿಸಿ (ಖ ಬ) 2ಕಣ್ಣೆತ್ತಿ (ಕ) ಕಂಗೆತ್ತಿ (ಖ ಬ) 3 ಡ (ಖ ಬ) 4 ವಾ ( ಗ ಘ) 5 ವೃ ( ಗ ಘ) 6 ದೊಳೆ (ಅ) 7 ನಂ (ಅ) 8 ನೋ (ಅ) 9 ಬಿನ (ಅ) 10 ಲವಿಂ (ಖ ಬ) 11 ಕುಂದಂಗಳಿಂ (ಕ) 12 ಲಿಂ ( ಅ)

ಮೊಳೆವುಲ್ ಮೆಯ್ನವಿರಾಲಿ ಲೋಲನಯನಂ ಗೀವಾರಣಬಾಣಾಸನಂ
ನಳಿತೋಳಾಡುವ ಸೋಗೆ ಸೋರ್ಮುಡಿ ಪೊನಲ್ ರೋಮಾಳಿ ಮಿಂಚೋಲೆವೋಲ್
ಜಳದಂ ಪೆರ್ಮೊಲೆ ಶಕ್ರ [1]ಗೋ[1] ಪಮಧರಂ ತಾನಾಗೆ ಕಾರೆಂಬ ನ
ಲ್ಲಳೆ ಬಪ್ಪಂತತಿ ಕಾಮುಕರ್ಗೆ ಮನದೊಳ್ ಮಾಡಿತ್ತತಿಪ್ರೀತಿಯಂ ೨೧೯

ಕಡವಲದುರ್ವು ಮೊಲ್ಲೆಯ ಪೂ.
ಗುಡಿ ನಿಮಿರ್ದುವು ಸೋಗೆ ಕೇಗಿದುವು ಕೇದಗೆ ಬೆ
[2]ಳ್ಪೊಡೆ[2]ವೋದುವು ಚಾದಗೆಗಳ್
ಕಡಂಗಿ ನುಂಗಿದುವು ತೋರವನಿಯಂ ಕಾರೊಳ್ ೨೨೦

(ರಾಮಚಂದ್ರ ಚರಿತ ಪುರಾಣಂ ೨-೫೨)

ನಿಳಯದ ಸೂರ್ಗಸೊಳ್ ತರದೆ ಮುತ್ತಿನ ಸೂಸಕದಂತೆ ನಂದನಂ
ಗಳ ತರುಪತ್ರದೊಳ್ ಮುಕುಳಮಂಜರಿಯಂತೆ ಚರತ್ಪುರಾಂಗನಾ
ವಳಿಯ ಕುರುಳ್ಗಳೊಳ್ ತಳಿದ ಸೇಸೆಗಳಂತೆಳವುಲ್ಗಳೊಳ್ ಘನೋ
ಪಳಕುಳದಂತೆ ತೊೞೆದುವು ನವ್ಯ ಘನಚ್ಯುತ ತೋಯಬಿಂದುಗಳ್ ೨೨೧

(ಜಗನ್ನಾಥ ವಿಜಯಂ ೪-೧೯)

ಸುರಗೋಪಂಗಳುಮಾಲಿಕಲ್ಲುಮೆಳವುಲ್ಲುಂ ಕೆಂಪಿನಂ ಬೆಳ್ಪಿನಿಂ
ಹರಿತಚ್ಛಾಯೆಯಿನಲ್ಲಿಗಲ್ಲಿಗೆಸೆಗುಂ ಮಾಣಿಕ್ಯದಿಂ ಮುತ್ತಿನಿಂ
ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾಭೂಷಣಾನೀಕಮಂ
ಧರಣೀವಲ್ಲಭೆಗಂಬುದಾಗಮವಿಟಂ [3]ಕೈಗೆಯ್ಸಿ[3] ದೊಂದಂದದಿಂ ೨೨೨

(ಜಗನ್ನಾಥ ವಿಜಯಂ ೪-೨೦)

**ಕೞೆ** ಕಾಱ್ಬುರದಿಂ ತೀವಿರೆ
**ಕೞೆ**ಗಳ ಕಡೆಗೋಡಿ ಪಳ್ಳಮಂ ಪಳ್ಳಂಗಳ್
ತೊೞೆಯಂ ತೊೞೆಗಳ್ [4]ಬಾಂದೊೞೆ
ಯೞೆಯನನೊಲವಿಂದೆ ಕೂಡಲಳ್ಕುೞೆ[4] ಪಥಿಕರ್ ೨೨೩

(ಜಗನ್ನಾಥ ವಿಜಯಂ ೪-೩೩)

ಘನರಾವಂಪೊಣ್ಮೆ ಮೀನಂ ಮೊಸಳೆಯುಮೊಡಮೆಬ್ಬಿತ್ತೆನಲ್ ಮೇಗಣಿಂದಂ
ಬಿನ ಕಟ್ಟಂಬಿಟ್ಟವೊಲ್ ಸಂದಿಸಿಕೊಡಗೊಡದೊಳ್ ಪೊಯ್ದವೋಲಾಗೆ ಭೋರ್ಭೋ
ರೆನುತುಂ ಸಂವರ್ತಮೆತ್ತಂ ಜಳಚಳಕುಳದೊಂದಂದಂದಿಂ ಗೋಕುಲಂ ಬ
ಲ್ಬೊನಲೊಳ್ ತೇಂಕಾಡುವನ್ನಂ ಕೞೆದುವು ಮೞೆಯಂ ನೂತಜೀಮೂತಜಾಲಂ೨೨೪

---

1 ಚಾ (ಕ) 2ಳ್ಗುಡಿ (ಅ) 3 ತಂದಿಕ್ಕಿ(ಅ) 4 ತಾಂಬಾಂದೊ=ಗೂರೆಯೆನಲುರ್ಬೆ ಪಕ್ಕರ= ರೆ(ಅ) ಈ ಪದ್ಯ (ಕ) ಪ್ರತಿಯಲ್ಲಿಲ್ಲ.

## ಶರದ್ವರ್ಣನಂ

ತೊಲಗದ ಮೋಡವೋಡಿದುದು ತಂದಲಗುಂದಲೆಯಾಯ್ತು ಮೇಘಮಂ
ಡಲವಳಿೞಿತ್ತು ಮಿಂಚುವೆಳಗುಂ ಬೞಿಮಾಯ್ತು ಶಿಖಂಡಿ ತಾಂಡವ
ಕ್ಕಲಸಿದುದಂದು ಕುಂದಲತೆ ಕುಂದಲೊಡರ್ಚಿದುವಂಚೆ ಚಂಚುವಿಂ
ನಲಿದು ಮೃಣಾಳಮಂ ಸವಿದುದಾಯ್ತು ಶರತ್ಪ್ರಥಮಪ್ರದೇಶದೊಳ್ ೨೨೫

(ಜಗನ್ನಾಥ ವಿಜಯಂ ೪-೩೭)

ಚಾದಗೆಯ ಸೊಕ್ಕು ತೀರ್ದುದು
ಕೇದಗೆಯಗೆಯೆತ್ತಿ ಪೋಯ್ತು ಗಿರಿಮಲ್ಲಿಗೆಯಾ
ಮೋದಂ [1]ತಳೆದುದು[1] ದರ್ಬಿಸಿ
ಪೋದುದು ನುಣ್ದನಿ [2]ನವಿಲ್ಗೆ[2] ಶರದಾಗಮದೊಳ್ ೨೨೬

ಮಱೆಯಿನ್ನೆತ್ತಣದೆಂಬಿನಂ ಬೆಳಗುಗುಂ ಬಾನೊರ್ಮೆ ಮತ್ತೊರ್ಮೆ ಪೆ
ರ್ಮಱೆಕಪಳ್ಗು ರವಿ ಕೊ[3]ಡೆ [3]ಪಣ್ತು ಮುಗಿಲಿಂ ಸೀಳ್ದೊಂದದಿಂ ಬಿಸಿಲ್
ಮಱೆ ಕೊಳ್ಗುಂ ಗಿಳಿಸೋವ ಪಾಮರಿಯರಂ ಕೆಮಿೞಿ ನೀರವ್ರಜಂ
ಸುಱಿಗುಂ ಶಾಡ್ವಳಮಾದ ಶಾಳಿವನದೊಳ್ ನೀರಾಜನಂ ಮಾೞ್ಪವೋಲ್ ೨೨೭

ನಡೆದುದು ಬಟ್ಟೆ ಬಟೆಟಯ ಕೆಸಱ್ಸಱಿ ವಿೞ್ತುದು ನಂದನಂ ನಯಂ
ಬಡೆದುದು ಪೂಗೊಳಂ ತಿಳಿದುವಭ್ರಪಥಂ ಬೆಳಗಿತ್ತು ಪಳ್ಳಮು
ರ್ಕುಡಿದುದು ಕೂಡೆ ಬೊಂಬೆ ಸಸಿಯಾದುವು ಕೆಯ್ ಪಸುರ್ವೋದ ಪುಲ್ಗಳಂ
ಪಿಡಿದುವು ಶಾಲಿ [4]ಗಾ[4]ಪಿಯರ ಗಾವರ ಮುಬ್ಬರಮಾಯ್ತು ಸುತ್ತಲುಂ ೨೨೮

ನೀರದವಿಟಂಗೆ ವಿದ್ಯು
ನ್ನಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ
ದೂರಿಸಿ ಬೆಳರ್ತ ತೆಱದಿಂ
ಶಾರದ ಜಳಧರದ ತುಱುಗಲೊಗೆದುವು ನಭದೊಳ್ ೨೨೯

ಜೀವನಮುಳ್ಳಿನಮಿತ್ತ ಖಿ
ಳಾವನಿಗಂ ಕೀರ್ತಿಶೇಷಮಾಯ್ತೆ [5]ನಲಂದ್
ಬ್ದಾವಳಿ ಬೆಳರ್ತು ಬಾನಂ
ತೀವಿದುವು ಪರೋಪಕಾರಿ ಕಟ್ಟೆಡೆಯುಂಟೇ ೨೩೦

(ಲೀಲಾವತಿ ೫-೨೬)

---

1 ತಳಿತುದು ( ಕ ಬ) 2 ನವೀನ ( ಕ ಬ) 3 ಡಿ (ಕ) 4 ಗೋ (ಕ ಖ ಗ ಬ) 5 ನೆ ತುಂಗಾ ( ಆ ಕಾ)

ತರದಿಂ ನಲಿನಲಿದಾಡುವ
ಸರಸದ ಮಕ್ಕಳವೊಲಂಚೆಗಳ್ ಮಾನಸದಿಂ
ಬರೆ ಮೊೞೆದು ಶರದದವನಿಪ
ನರಮನೆಯಂಗಣಮಿದೆನಿಸಿ ಬೆಳಗಿತು ಗಗನಂ ೨೩೧

ಪಿಂದೆ ತಲೆ[1]ಗರೆ[1]ದ ಕದಿರ್ಗಳ್
ಸಂದಣಿಗೊಂಡರ್ಕಬಿಂಬದಿಂ ಪೊೞಪೊಣ್ಮು
ತೊತ್ತಂದೊಂದನೊೞಸಿ ಕಿಡಿವಿಡು
ವಂದದೆ ಕಡುವಿಸಿಲ ಪೊಳುಪುವಡೆದುದು ಕಾಯ್ಪಂ ೨೩೨

(ಲೀಲಾವತಿ ೫-೩೮)

ಮುನ್ನುಂಗಿ ದಹನನಂ[2]ತಪ
ನನ್ನೆಲಕು[2]ಗುಳ್ವಂತೆ ಬಿಸುಗದಿರ್ಗಳ್ ನೆೞಕಾ
ಯ್ವನ್ನಂ ಸುಡುತಿರೆ ಪಥಿಕರ್
ಬೆನ್ನಂ ಕೊಂಡೋಡಿ ಮೆಳೆಯ ನೆೞಲಂ ಸಾರ್ದರ್ ೨೩೩

(ಲೀಲಾವತಿ ೫-೪೦)

ತಿಂಗಳ ಯೌವನ ವಿಭವಮ
ನಂಗನ ಸಿರಿಹುಟ್ಟಿದಮೃತವಾರಾಶಿ ಚಕೋ
ರಂಗಳ ಕಂಗಳ ಹಬ್ಬಂ
ಶೃಂಗಾರಂಬಡೆದ ಸೈಪು ಶರದದ ಜೊನ್ನಂ ೨೩೪

ಅರಗಿಳಿಯ ಹಿಂಡು ಬಂದುಗೆ
ಯರಲಂದದ ಚಂಚುವಿಂದೆ ಕೞಮೆಯ ತೆನೆಯಂ
ಬರೆ[3]ತೆಗೆದು ಕರ್ಚಿ ನೆಗೆದುವು[3]
ಶರದಂ ಪುಗೆ ಪಾೞಿ ಪೋಪ ಸುರಚಾಪದವೊಲ್ ೨೩೫

(ಲೀಲಾವತಿ೫-೪೧)

ಪೊಳೆವ ಬಿಸಿಲ್ಗೆ ಮೆಯ್ವೆಗಳು ಚಂದನಪಾಂಡುಪಯೋಧರಾಗ್ರದಿಂ
ಬಳಿದಿೞತರ್ಪ ಬೆಳ್ಸರಿಗೆಹಾರಮೆ ಸಾ[4]ಲ್ತಿ[4]ರೆ ಪೋಲ್ವೆಯಿಂ ಸಮು
ದ್ಧಳಿತಸರೋಜಗಂಧಿ ಕಳಹಂಸಮನೋಹರಯಾನೆ ಸಸ್ಮಿತೋ
ತ್ಪಳಧವಳಾಕ್ಷಿಯೇಂ ಸುರಿದಳೋ ಶರದಂಗನೆ ಕಣ್ಗೆ ಶೋಭೆಯಂ ೨೩೬

(ಲೀಲಾವತಿ ೫-೪೨)

1 ದೆಗೆ (ಅ) 2 ದಹನಂ ನುಗುಳ್ದು ( ಖ ಬ) 3 ಕರ್ಚಿ ಪಾ= ತಿರ್ದುವು(ಅ) 4 ರ್ತಿ ( ಖ ಬ)

ಅರೆವಸುರಾಯ್ತು ಹುಲ್ಲೆಸೆಯೆ ನಿಂದುವು ಕಾಯ್ ಪೊಡೆ ಕೊಯ್ಯಲಾಯ್ತು ಬಂ
ಧುರತರ ಶಾಳಿ ನೀರ್ಕ್ಯಕೆ ತೊಟ್ಟನೆ ಮಾಣ್ದುದು ಚಂದನಕ್ಕೆ ಮೆ
ಯ್ಯರಸಿದುದಂಗರೇಖೆ ಹ್ಯೊಹಕ್ಕಿಗಳೋವರಿವಕ್ಕವಾವಗಂ
ಶರದದ ಮಾತು ಪಿಂಗಿದುದು ಪೊಕ್ಕುದುಮಾಗಿ ಮಹೀವಿಭಾಗದೊಳ್ ೨೩೭

ಅಣಿಯರಮಾಡಿ ಮೂಡಗಡಲೊಳ್ ತೆರೆಮಾಲೆಯನೆತ್ತಿ ದೇವವಾ
ರಣಕರಶೀಕರೋತ್ಕರಮನಾಂತು ಶಚೀರಮಣಾಭಿಷೇಕವಾಃ
ಕಣನಿಕುರುಂಬಮಂ ತಳೆದು ಬಂದೆಸಗಿತ್ತ ತಿಶೈತ್ಯಕಾರಣಂ
ಪ್ರಣಯವಿಮುಕ್ತವಲ್ಲಭವಿದಾರಣನಿಂದ್ರದಿಶಾಮೀರಣಂ ೨೩೮

(ಜಗನ್ನಾಥ ವಿಜಯಂ ೧೪-೪)

ಗಗನಂ ದಿಗ್ವಳಯಂದಿನೇಶ [1]ವಳಯಂ[1] ಶೈಲಾಳಿ ತೋಯಾ [2]ಶ[2]ಯಂ
ನಗರಂ ನಂದನಮೆಂಬ ವಸ್ತುಗಳನಾರುಂ ಕಾಣದಂತಾಗಿ ತೊ
ಟ್ಟಗೆ ಕಣ್ ವಂಚಿಸಿ ನುಂಗಿ ತೋರ್ಪ ಚಪಲಂ ಹೇಮಂತಮೆಂಬಿಂದ್ರಜಾ
ಲಿಗನೊದೂದಿದ ಧೂಮದಂತಸದಳಂ ಪರ್ಬಿತ್ತು ಮಂಕೆತ್ತಲುಂ ೨೩೯

ಬಿಟ್ಟು ಸರೋಜಮಂ ಕುವಲಯಕ್ಕಡಿಯಿಟ್ಟುದು ತುಂಬಿ ಜಾತಿ ಕಂ
ಪಿಟ್ಟುದು ದಿಕ್ತಟಂಗಳನಶೇಷ ನದೀನದ ನಿರ್ಝರಾಂಬು ರೂ
ಪಿಟ್ಟುದು ಚಂದ್ರಕಾಂತಹಿಮವಾರಿಗೆ [3]ಚಿಂತಿ[3] ಸಿ ಜಕ್ಕವಕ್ಕಿ ಸಾ
ಲಿಟ್ಟುದು ಕಣ್ಣ ನೀರನೆನೆ ಮಾಗಿ ಬರಲ್ ಮೊದಲಿಟ್ಟು ದೆಂಬಿನಂ ೨೪೦

(ಜಗನ್ನಾಥ ವಿಜಯಂ ೧೪-೬)

ಮುಗಿಯೆ ಕರದ ಕಂಜಂ ವಾಜಿಗಳ್ ಸುರ್ಕೆ ಸೂತಂ
ಸುಗಿದು ಪೆಱವನಾದಂತೈಕಿಲಿಂ [4]ಹೊನ್ನ[4] ರಂಗಳ್
[5][ತ][5] ಗೆಯೆ ರಥದ ಕೀಲಂ ಕಿಱುತ್ತು ಪೊತ್ತಿಕ್ಕೆ ಕಣ್ಣೋಳ್
ಪುಗೆ ಪೂಗೆ ರವಿಸಾರ್ತಂದೂದುವಂ ಪೋಪ ಕಿಚ್ಚಂ ೨೪೧

(ಲೀಲಾವತಿ ೯-೬)

ಮಾಸರಮೆನೆ ಪಾರದದಿಂ
ಪೂಸಿದವೊಲ್ ಪೊನ್ನ ಮುಕುರಮಂ ಹಿಮಲಿಪ್ತಂ
ನೇಸಱ ಬಿಂಬಂ ತಿಂಗಳ
ಕೂಸಿನವೊಲ್ ಮೂಡುತಿರ್ಪುದಂದಿನ ದಿನದೊಳ್ ೨೪೨

(ಲೀಲಾವತಿ ೯-೮)

---

1 ಶಶಿಯಂ ( ಖ ಬ) 2 ಸಿ ( ಕ) 3 ಮಿಂಚಿ ( ಖ ಬ) 4 ಪೆರ್ನ ( ಕ ಬ) 5 ತೆ ( ಅ ಕ ಖ ಬ)

ಹಿಮಮನಲರ್ಚಿ ತೀಡೆ ಪದನಂ ವನಮಾಲೆಗೆ ಪೋಯ್ತು ವಿಭ್ರಮಂ
ಭ್ರಮ[1]ರನಿಷೇ[1] ವ್ಯಮಾಯ್ತು ಕುಮುದಂ ಮುದಮಂ ಪಡೆದತ್ತು ಪಣ್ತ ಕ
ರ್ಬಮೃತರಸಾವಿಳಂ ವಿಳಯಮೆ[2]ಯ್ದಿದುದಬ್ಜ[2]ವನಾಳಿ ನಾಳಿಕೇ
ರಮನವಳಂಬಿಸಿರ್ದುವು ಫಲಂ ರಸಪೂರಿತಮಾಗಿ ಮಾಗಿಯೊಳ್ ೨೪೩

(ಜಗನ್ನಾಥ ವಿಜಯಂ೧೪-೫)

ಗಿರಿತಟದೊತ್ತುಗೊಂಡು ಮೃಗಸಂಕುಲಮಿರ್ದುವು ಜೀರ್ಣಕೋಟರಾ
ವರಿತಟದೊತ್ತುಗೊಂಡು ಖಗಸಂಕುಲಮಿರ್ದುದು ಮಾಗಿಯೊಳ್ ಸರೋ
ವರತಟದೊತ್ತುಗೊಂಡು ಪೊಣರ್ವಕ್ಕಿಗಳಿರ್ದುವು ಕಾಮಿನೀಪಯೋ
ಧರತಟದೊತ್ತುಗೊಂಡು ವಿಟನೀಟಕರಿರ್ದುದು ಮುಂಬಗಲ್ವರಂ ೨೪೫

(ಜಗನ್ನಾಥ ವಿಜಯಂ೧೪-೧೦)

ತಳರ್ದು ಕುಳಾಯದಿಂ ಬಿದಿರ್ದೞಕೆಯ ನೀರ್ವನಿಯಂ [3]ತೆರಳ್ದ[3] ತು
ಪ್ಪುೞನೊ[4]ದಂಟೆ[4] ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ
ಣ್ಗಳನರೆಮುಚ್ಚಿ [5]ತೋದ[5] ಗಱಯಂ ನಸು ಜೋಲಿಸಿ ಪಕ್ಕಿಗಳ್ ಮರಂ
ಗಳ ತುದಿಗೋಡಮೇಲೆ ದನಿಗೆಯ್ಯುತಮಿರ್ದುವು ಮುಂಬಗಲ್ವ[6]ರಂ[6] ೨೪೬

(ಲೀಲಾವತಿ ೯-೧೫)

ಖಂಡಿ[7]ಸಿ[7] ಬಿಸಕಳಿಕೆಗಳಂ
ತುಂಡಂ ಕುತ್ತಿಱಯೆ [8]ಬಿರಿದು[8] ಬಳ್ಕಿಸಿ ತಲೆಯಂ
ಕೊಂಡೋಡಿ [9]ಕೊಡಹಿ[9] ಕೊಂಡವು
ಮಂಡಳಿಸಿದ ಪಕ್ಕ[10]ದಿಂದೆ[10] ಕಳಹಂಸಂಗಳ್

ತುದಿಗೋಡಿಂಗೇಱ ಕೊಂಬಂ ಪಿಡಿದು ಜಡಿದು ಪುರ್ವಿಕ್ಕಿಯುಃಪೆಂದು ಮುನ್ನೇ
ಱದ ಕೊಂಬಂ ನೋಡಿ ಮೆಯ್ಯಂ ಸುಗಿದುಗಿದುರಮಂ ಪಿಕ್ಕಿ ಪೇಸ್ಪಿಂಡನಾಯ್ದು
ರ್ಬಿದ ಮೆಯ್ಯಂ ಕಯ್ಯಿನೆತ್ತ. ತುಱಸಿ ಮುಱಗಳಂ ಸಾರ್ಚಿ ಮುಂದಣ್ಗೆ ಕುಳ್ಳಿ
ರ್ದುದು ಕೋಡಂ ಹೇಮಂತದೊಳೆಳವಿಸಿಲಂ ಕಾಯಲೆಂದೊಂದು ಧೂರ್ತಂ ೨೫೭

ಪಲ್ಗಿರಿದು ಪುರ್ವನುರ್ವಿ ಬೆ
ರಲ್ಗೊನೆಯಿಂ ತುಱಸಿ ಬಱಿಯ ಸೀದುರಪ್ಪೞ ಬಂ
ಬಲ್ಗಳನುಗುರಿಂ ಪಿಕ್ಕಿ ಬಿ
ಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ ೨೫೮

(ಜಗನ್ನಾಥ ವಿಜಯಂ೧೪-೧೧)

---

1 ರಿಗಸೇ(ಖ ಬ) 2 ಯ್ದುವುದುಂಜ(ಖ ಬ) 3 ತಳರ್ದು (ಖ) 4 ಸೆದುಂದು ( ಖ ಬ) 5 ಕೋಡ ( ಕ ಖ ಬ) 6 ರಲ್ (ಅ) 7 ಸೆ ( ಅ) 8 ಬಿದಿರ್ದು(ಅ) 9 ತೊಡೆದು ( ಅ) 10 ದಲ್ಲಿ (ಅ)

ಮಱಿಗಳನಿಱುಕಿ ಮೋಹದೆ
ನೆಱಂಕೆಯಿಂ ಗೂಡುಗೊಂಡು ಗೂಡಿನೊಳಿ [1]ರುಳೇ[1]
[2]ನೊ[2]ಱಗಿರ್ದುದೊ ಕೂಗದೆ ಕಣ್
ತೆಱೆಯದೆ ಕುಕ್ಕುಟ ಕುಂಟುಂಬಿನೀ ನಿಕುರುಂಬಂ ೨೫೯

(ಜಗನ್ನಾಥ ವಿಜಯಂ ೧೪-೫)

ಪೊಱಮಟ್ಟು ತೊಱೆಯ ನಡುವಣ
ಕುಱುವಂಗಳ [3]ತಡಿಯೊ[3]ಳಿರ್ದು ಕಾಯ್ದುವು ಬಿಸಿಲಂ
ಮಱಿಗಳ್ ಪಕ್ಕಂ [4]ಬೆಂಬಿಡ
ದೊಱಗಿರೆ[4] ಕುಂಭೀರ ಕಮಠ ಕರ್ಕಟಕಂಗಳ್ ೨೬೦

ನಂದುವ ಪುಲ್ಲ ಕಿಚ್ಚಿನೊಳೆ ಕಪ್ಪಡಮಂ [5]ಪಱಿ[5]ದಿಕ್ಕಿ ಪಾಂಥನಿಃ
ಪೆಂದಿರದೂದಿ ಪೊಣ್ಮೆ ಪೊಗೆ ಕಣ್ಣೊಳಗಂ ಪುಗೆ ಬಾಷ್ಪ [6]ವಾರಿ[6]ಬೀ
ೞ್ತಂದು ತದಗ್ನಿಯಂ ನದಿಪಿದತ್ತ ಕಟಾತನ ಬೆನ್ನ ಕಪ್ಪಡಂ
ಬೆಂದುದು ಬೆಂದು [7]ವಿೞ್ದುದು[7] ಹಿಮಾನಳ[8] ನಿಂತುಟು ಪಾಪದುಜ್ಜುಗಂ[8] ೨೬೧

(ಲೀಲಾವತಿ ೯-೧೯)

ಪೊಸ[9] ಗಿಚ್ಚಂಪುಲ್ಲೊಳಿ[9]ಟ್ಟೂದಿದೊಡುರಿದು [10]ರಿ ಕೂರ್ಚಾ[10]ಗ್ರಮಂ ಪತ್ತೆ ಕಯ್ಯಿಂ
ಪೊಸೆದುಂ ವಸ್ತ್ರಾಂತದಿಂಮೋದಿಯುಮುಗುೞ್ವೆಱಿಯಿಂ ಮೊಕ್ಕಳಂ ನಾಂದಿಯುಂ ನಂ
ದಿಸಲೆಂತುಂ ಪಾಂಥನಂದಾಱಿದೆ [11]ನ[11]ಡುಮಡುವಂ ಪೊಕ್ಕು ಬಿರ್ದೈಕಿಲಿಂ ಕಂ
ಪಿಸುತಿರ್ದಂ ಪುಲ್ಲ ಕಿರ್ಚುಂ ಪೊಲೆಯನ ಕಳೆಯುಂಮಾಡದಾವಂಗೆ ಕೇಡಂ ೨೬೨

(ಲೀಲಾವತಿ ೯-೨೦)

ಗಂಗೆಯ ಸೂಡನಂದುಱಿದು ಸೂಡಿದ ಚಂದ್ರಕಲಾವತಂಸಮಂ
ಪಿಂಗಿಸಿ ಸುಟ್ಟು ಮನ್ಮಥನೊಳಾದ ವಿಭೂತಿಯನೊಟ್ಟಿಕೊಂಡು ವಾ
ಮಾಂಗದೊಳಿಟ್ಟು ಪಾರ್ವತಿಯನೀಶ್ವರನಗ್ಗಳಗಣ್ಣ ಬೆಂಕಿಯಿಂ
ಭಂಗಿಸುವಂ ಕುಬೇರಗಿರಿಗಹ್ವರದೊಳ್ ಶಿಶಿರಾತಿರೇಕಮಂ ೨೬೩

ಕರಿಣೀಪೇಚಕಮಂ ತುಡುಂಕದೆ ವನೇಭಂ ಕಾಮುಕರ್ ಕಾಮಿನೀ
ಪರಿರಂಭಸ್ಪೃಹರಾಸೆಗೆಯ್ಯರೆ ರತವ್ಯಾಪಾರಮಂ ಪುಲ್ಲೆಯಂ
ಹರಿಣಂಗಳ್ ನಡೆ ನೋಡ [12]ವಿಂತು ತುಹಿನವ್ಯಾಘಾತದಿಂ[12] ಬಿಲ್ಗೆ ಕೈ
ದರಲೇನಾಱನೊ ಪೂವಿನಂಬು ತನಗಿಲ್ಲಾಗಿರ್ದನೋ ಮನ್ಮಥಂ ೨೬೪

(ಲೀಲಾವತಿ ೯-೪)

---

1 ರುಳುಂ ( ಕ ಖ ಬ) ರದೇಂ (ಅ) 2 ಪೊ (ಕ ಖ ಬ) 3 ಕೆಲದೊ (ಅ) 4 ಬಿಡದೆಡೆ ಗಿ=ದಿರೆ (ಅ) 5 ಪಿರಿ (ಅ) 6 ಬಿಂದು (ಅ) 7 ದಾಗಳೆ (ಅ) 8 ನಂತುಟು ಪಾಂಥರುಬ್ಬ ಸಂ (ಅ) 9 ಪುಲ್ಲೊಳ್ ಕಿಚ್ಚನಿ (ಅ) 10 ಕೆಚಾಗ್ರಾ (ಅ) ವಕ್ಷೋಜಾ(ಗ ಘ) 11 ಕ(ಕ ಬ) 12 ಲೊಲ್ಲವೆ ಹಿಮವ್ಯಾಪಾರದಿಂ (ಅ)

ತಳೆದ ಸುವರ್ಣಭೂಷಣದ [1]ಪೂಸಿದ ಕುಂಕುಮದಿ[1]ಟ್ಟ ರೋಚನಾ
ತಿಳಕದ ರಾಗದಿಂ ಮದನರಾಗಮೆ ಮೂರ್ತಿರಯನಾಂತವೊಲ್ ಮನಂ
ಗೊಳಿಪೆಳವೆಂಡಿರಂಗಣದ ಹೇಮವಿತರ್ದಿಯೊಳಿರ್ದು ಕಾದರಂ
ದೆಳವಿಸಿಲಂ ಮನಂಬಯಸಿ ಕಾಯೆ ವಿಟಪ್ರಕರಕ್ಕೆ ಮನ್ಮಥಂ ೨೫೫

(ಜಗನ್ನಾಥ ವಿಜಯಂ ೧೪-೯)

ಪಿರಿದುಂ ಕಾರ್ಯಾತುರಂ ಮಾಣದೆ ಕರೆದೊಡಮೀ ಬಂದೆನೀ ಬಂದೆನೆಂದೊಂ
ದರೆಜಾವಂ ಕಾಮಿನೀಕರ್ಕಶನಿಬಿಡಕುಚಾಲಿಂಗನಾಲಿಂಗಿತಂ ರಕ್ತವಸ್ತ್ರಾ
ಸ್ತರಣಂ ಕಾಶ್ಮೀರರಾಗಾವಿಳನತಿಮೃದುಶಯ್ಯಾತಳಂ ನಕ್ತಭೀತಾ
ತುರಚಿತ್ತಂ ಕಾಂತನಿರ್ದಂ ಸಹಚರಗಮನೋದ್ಯೋಗ[2]ಬಂಗಂ[2] ಭುಜಂಗಂ ೨೫೬

ಅಡಿಯಡಿಯೊಳ್ ತೊಡೆ ತೊಡೆಯಳ್
ನಡು ನಡುವಿನೊಳುರಮುರೋಜದೊಳ್ ತೋಳ್ ತೋಳೊಳ್
ತೊಡರ್ದಿರೆ ಬಾಯ್ವಾಯೊಳ್ ಮನ
ದೊಡಕಿನೊಳಿರೆ ಮಾಗಿಗೀಗಿಯೇಗೆಯ್ದಪುದೋ ೨೫೭

ಒಕ್ಕುಡಿತೆಗಂಗಳಬಲೆಯ
ಸುಕ್ಕುಂಗುರುಳವಳಪಲ್ಲವಾಧರದವಳಂ
ಕ್ಕಸಕುಚದವಳಂ ತಾಂ
ತಕೆಕ್ಕ್ಯಸಕು ಮಾಗಿಗೀಗಿಯೇಗೆಯ್ದಪುದೋ ೨೫೮

ನೆಲವಾಸು ತಂಬುಲಂ ಪೆ
ರ್ಮೊಲೆಗಳ ಸೞಿಮಿಂಡಿ ಸುಪ್ಪತಿಗತಗೆ ಧವಳಾರಂ
ಕೆಲದ ಸಿಗಳಿಗೆಯಿನಿಂಬಿಂ
ಸಲೆ ಸವಿಪೊಡೆ ಮಾಗಿಗೀಗಿಯೆಗೆಯ್ದಪುದೋ ೨೫೯

ಗಳರವಮಾಗಿ ಮುದ್ದು ಮೊಗಮಾಗಿ ದರಸ್ಮಿತನೇತ್ರಮಾಗಿ ಕೋ
ಮಳ ಕಚಮಾಗಿ ಪೀನಕುಚಮಾಗಿ ಸಮುಚ್ಚನಿತಂಬಮಾಗಿ ಸಂ
ಚಳತನುಮಧ್ಯಮಾಗಿ ತನುಗಂಗಜರಾಗಮುಮಾಗಿ ನೀಱೆಯಂ
ತೊಳಪುಗುವಂತೆಮಾಗಿ ಬರೆ [3]ಬಾನಿಲೆ[3] ಯೆಂಬರೆ ಭೋಗಭಾಗಿಗಳ್ ೨೬೦

ಅಂಬುಜನೇತ್ರೆಯರ್ಕಳಘನಸ್ತನದೊತ್ತು ನಿತಂಬದೊತ್ತುನು
ಣ್ಣಂಬಳವಟ್ಟ ಪೆರ್ದೊಡೆಗಳೊತ್ತು ಭುಜಂಗಳ ತಣ್ಣನೊತ್ತು ಬಿಂ
ಕಂಬಡೆದಿರ್ದ ತೆಳ್ಗದಪಿನೊತ್ತು ವಿಟರ್ ನೆಱೆ ಕಾವುದಲ್ಲದೀ
ಕಂಬಳಿ ದಿಟ್ಟ ಬೂರವಡವೆಂಬಿವು ಕಾವುವೆ ಶೀತಕಾಲಮಂ ೨೬೧

---

1 ಕುಂಕುಮಪಂಕದೊಳ್ (ಖ ಬ) 2 ಕುಂಭಾ ( ಖ ಬ) 3 ಬಾಗಿಲ ( ಖ ಬ) ಮಾಗಿಲ ( ಗ ಘ)

ನೆನೆಯಲೊಡನೆತ್ತಿ ಮನದೊಳ್
[1]ತನುಗಿಚ್ಚಿಂ[1] ಹಿಮವನೋಡಿಸುವ ನವಯುವತೀ
ಸ್ತನಭರಮಂ ತೆಗೆದಪ್ಪಿದ
ಮನುಜರಿಗೇನರಿವುದರಿದೆ ಮಾಗಿಯ ಮೂಗಂ ೨೬೨

(ಲೀಲಾವತಿ-೧೭)

ಇನಿಸುಗುರ್ವೆಚ್ಚನಪ್ಪುಣಿಸು ಕುಂಕುಮದ[2]ಣ್ಪು[2]ಕದಂಬದಂಬುಲಂ
ಕನಕವಿಭೂಷಣಾಳಿ ಪೊಸ ಜಾದಿಯ ಪೂ ಧವಳಾರವಟ್ಟಿ[3]ಅಿಂ[3]
ಜನಿಯಿ [4]ಸಲಂ ಚೆ[4] ವಾಸುಗಳೊಳೋಪಳ ಪೆರ್ಮೊಲೆವೆಂಕೆಯಿಂದದೇಂ
ತನತನಗಿಕ್ಕಿ ಮೆಟ್ಟಿದುದೊ ಭೋಗಿಜನಂ ಶಿಶಿರಾತಿರೇಕಮಂ ೨೬೩

(ಜಗನ್ನಾಥ ವಿಜಯಂ೧೪-೪೯)

ಕೃತಶೀಘ್ರ ಸ್ನಾನರಾವರ್ತಿತವಿಕೃತಕರಾಕೃಷ್ಟವಸ್ತ್ರಾಂತರಾವಿ
ಸ್ಮಿತಗರ್ಭರ್ ಗದ್ಗ [5]ದೋಚ್ಚಾರಿ[5]ತ ಜಪಮುಪಸಂಜಾತರೋಮಾಂಚಮಾಕುಂ
ಚಿತಗಾತ್ರರ್ ವಜ್ನಿ ಸಂದೀಪನಪಟುವಟುದತ್ತೇಕ್ಷಣರ್ ನೀರತೀರ
ಸ್ಥಿತರಿರ್ದತ್ತಂದು ವೈಭಾತಿಕವಿಧಿ ವಿಹಿತಾಮೋಘಮಾಘಂ ದ್ವಿಜೌಘಂ ೨೬೪

(ಲೀಲಾವತಿ-೨೫)

ಬಿಸಿಬಿಸಿಯೋಗರಂ ಕೆಲದ ಸೋಡಗೆತೆಳ್ಪೊಳುದುಪ್ಪುಮುಪ್ಪು ಗಾಯ್
ಮೊಸರಿನಿದಪ್ಪ ಮಜ್ಜಿಗೆ ನಿವಾತದ ಶಯ್ಯೆ ಕದಂಬದಂಬುಲಂ
ರಸಿಕರ ಗೋಷ್ಠಿ ಬಟ್ಟಮೊಲೆಯೋಪಳ ತಳ್ತಮರ್ದಪ್ಪು ತಾವೆ ಬ
ಗ್ಗಿಸದೆ ಹಿಮಾಗಮೋಕ್ತಿಕ [6]ಜಡೋ[6] ದಯಮಂ ಸುಜೃತಾತ್ಮರಪ್ಪರಾ ೨೬೫
ರವಿರುಚಿಯಂ ಹಿಮಾಂಶುರುಚಿಯೆಂದು ಚಕೋರ ಚಯಂಗಳೀಂಟುತಿ
ರ್ಪುವು ಬಡಬಾಗ್ನಿಯಂ ಪವಳಮೆಂದಿರದಂಬುಚರಂಗಳೊಂದಿ ನಿ
ಲ್ಪುವು ಹರಭಾಳಲೋಚನನಂಗಜನೀಕ್ಷಿಸಿ ರಕ್ತಚಂದನ
ದ್ರವದ ಲಲಾಮಮೆಂದಿ [7]ಚಿಪನೇ[7] ವೊಗಳ್ವೆ ಶಿಶಿರಪ್ರಭಾವಮಂ ೨೬೬

(ಜಗನ್ನಾಥ ವಿಜಯಂ೧೪-೧೮)

ಎಸೆವಿಂದ್ರಾಶಾಸಮೀರಂ ತೊಲಗಿಸೆ ಕೆಲಸಾರ್ದಂತಿರತ್ಯಂತ ಶೀತ
ಪ್ರಸರಕ್ಕುಳ್ಳಳ್ಳಿ ಮೇಣಗ್ನಿಯ ದೆಸೆಗೆಳಸಿರ್ದಂತಿರಾಶ್ಚರ್ಯಮಂ ಪು
ಟ್ಟಿಸುತುಂತೆಂಕೆಣ್ಗೆ ಸಾರ್ದರ್ಕನ ಬಿಸುಗದಿರ್ಗಳ್ ಮಾಗಿಯೋಳ್ ತಣ್ಪನಾ[8]ಳ್[8]ಲ್
ಬಿಸಿಲಂ ಬೆಳ್ದಿಂಗಳೆಂದೀಕ್ಷಿಸುವುವು ತರಳೋತ್ತಾ [9]ನ[9] ತಾರಂ ಚಕೋರಂ ೨೬೭

(ಜಗನ್ನಾಥ ವಿಜಯಂ೧೪-೧೩)

---

1 ತನಿಗಿಚ್ಚಿಂ (ಖ ಬ) ಘನಗಿಚ್ಚಿಂ ( ಗ ಘ) 2 ಣ್ಕೆ (ಅ) 3 ಱ ( ಕಖ ಗ ಬ) 4 ಸಹಂಸೆ ( ಕ ಖ·ಬ)
5 ದಾಚೋದಿ ( ಖ ಬ) 6 ಚರೋ ( ಗ ಘ) ಹನದೇ ( ಬ ಖ ) 8 ಳ್ದ ( ಅ) 9 ರ ( ಖ ಬ )

ಓರಂತೆ ಮೆಚ್ಚಿದಂ ಕೃತಿ
ಸಾರಂ ಋತುವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೨೬೮

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಿಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್
ಋತುವರ್ಣನಂ ದಶಮಾಶ್ವಾಸಂ ಸಂಪೂರ್ಣಂ

# ವನವಿಹಾರವರ್ಣನಂ

ವನಪಾಲರ್ ಪೇೞ್ವ ಭೂಪರ್ ತರುಣಿಯರೊಡನಾನಂದ[1]ದಿಂದೆ[1]ಯ್ದೆ ಪೋಪಾ
ಬನದೊಳ್ ಪೊಗೊಯ್ವ ಪೂವಿಂ ತು[2]ಡು[2] ಗೆಯನಿಲವಿಂ ಮಾೞ್ಪ ತೂಗುಯ್ಯಲಂ ಮಾ
ವಿನೊಳಾಡುತ್ತಿರ್ಪ ಬೆಟ್ಟೇಱುವ ಮರನಡರ್ವಾ ಕಾವಣಕ್ಕೋಪ ತಂತ
ಮ್ಮ ನಿಯರ್[3]ಸಯ್ತುಂ[3] ಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ ನಾಡೆ ರಮ್ಯಂ ೧

ಆದಿಮೂರ್ತ್ತಿಯ ನನೆಯಿಂ ಚೂ
ತದ ಕಳಿಕಯಿನೆಸೆವ ಕರ್ಣಿಕಾರದ ಪೂವಿಂ
ಕದಳಿಯ ಸುೞಿಯಿಂದೋಲಗಿ
ಸಿದನೋಲಗದೊಳ್ ನೃಪಾಲನಂ ವನಪಾಳಂ ೨

ಕುರುವಕದಂಕುರಂ ತಿಲಕದುಜ್ವಳಪುಷ್ಪವಶೋಕದೊಳ್ದಳಿರ್
ಮರುಗದ ನುಣ್ಗೊನರ್ ದವನದೊಳ್ಗುಡಿ ಮಾವಿನ ಕೆಂದಳಿರ್ ನವಾಂ
ಬುರುಹದ ಮೊಗ್ಗೆ ಸಂಪತೆಯಲರ್ ಸುರಹೊನ್ನೆಯ ಪೂಗಳೆಂಬಿವಂ
ಮುರರಿಪುಗಿತ್ತು ಮೆಚ್ಚುವಡೆದುತ್ಸವದಿಂ ನುಡಿದಂ ಪ್ರಿಯೋಕ್ತಿಯಂ ೩

(ಜಗನ್ನಾಥ ವಿಜಯಂ ೧೪-೪೪)

ಎಸಗಿದುದೀಗಳೀಗಳಿನಿಸಪಯ್ಯನೆ ತೆಂಕಣಗಾಳೊ ಕೋರಲ
ಪ್ರಸರದೊಳೀಗಳೀಗಳೆದಪ್ಪುದು ಚೂತಮಹೀಜಮೆಯ್ದೆ ರಾ
ಗಿಸೆ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆಕಂತು ಬಿಲ್ಲನೇ
ಱಿಸಿದಪನೀಗಳೀ[4]ಗಳೆ[4]ದು ಸುಗ್ಗಿಯದೊಂದು ಪೊಡ[5]ರ್ಪಿದಾಗದೇ ೪

(ಕಾವ್ಯಾವಲೋಕನಂ ೩೭೭)

ಪಗಲೆಲ್ಲಂ ವನಕೇಳಿಯಿಂದಿರುಳೆಲ್ಲಂ ಚಂದ್ರಿಕಾಶ್ರೀವಿಳಾ
ಸಗತಾಂದೋಳವಿನೋದದಿಂ ದವತಿ.......... ದರ್ಪಕಂಗಕ್ಕೆ ಕಂ
ತುಗೆ ಮಾೞಂತೊಡೆ ಭಾಳನೇತ್ರನುರಿಗಣ್ಣಿಂ ಕಾಮಿನೀಕಾಂತಿವಾ
ರಿಗಳಿಂ ನಂದಿಸಲೆಂಬು ಬಂದುದು ಬಸಂತಂ ಸಂತತೋತ್ಸಾಹದಿಂ ೫

ಕೋಗಿಲೆಗಾಯ್ತು ಮಾವಿನೊಲುದೊಂಗಲಿನಿಂ ದನಿ ತುಂಬಿಗಾಯ್ತು ಮೇ
ಲಾಗಿರೆ ಬಂದ ಮಲ್ಲಿಗೆಯ ಸೌರಭದಿಂ ದನಿ ದೇವಸಾಲೆ ತಾಂ

---

1ನಕ್ಕೆ(ಗ ಘ) 2 ಡಿ (ಖ ಗ ಬ)3ತೈತುಂ (ಗ ಘ) 4 ಳೆಲೆ ( ಅ) 5 ರ್ಪುಗಾಣ್ಬುದುಂ (ಕ ಖ ಗಘ ಬ)

ಕೋಗಿಲೆ ಬಂದು ಬಿನ್ನವಿಸಲೆದ್ದುದು ಮಾವು ತಳಿರ್ತ ಭಂಗಿಯಂ
ರಾಗಿಪ ತುಂಬಿ ಬಿನ್ನವಿಸವೇೞ್ಪುದು ಮಲ್ಲಿಗೆ ಪೂತ ಭಂಗಿಯಂ ೬

ಮಾವಿನ ಬಂದ ಮಲ್ಲಿಗೆಯ ಬಾಲತಮಾಳಕುಜಾತಷಂಡಮಂ
ತೀವಿ ತಗುಳ್ ಸುತ್ತಿದದಿರ್ಮುತ್ತೆ ಕವುಂಗಿನ ಸಾಲ ಪಕ್ಕದೊಳ್ದ್
ಸಾವುಮನಾಳ್ದ ಸಂಪಗೆ ಮನಕ್ಕೆ ಮನೋಹರವೆಂಬ ಮಾತೆ ಕೇಳ್
ದೇವರ ಪಾದದಾಣೆ ಬನದೀಸುಳ ಮೈಸಿರಿ ಪೞಲಗ್ಗಳಂ ೭

ಪಿರಿದುಮನಂಗನಾ[1]ದರಿಸಿ[1] ತಮ್ಮನೆ [2]ನೊ[2]ರ್ಗಣೆಮಾ[3]ಡಿ ಪೊಂಗುವಂ
ತಿರೆ ಕಡುನಲ್ಲರಂ ಬಿಗಿಯೆ[3] ತಾಗಿ ಕರಂ ಬಿರಿವಂತೆ [4]ಬೇಗದಿಂ[4]
ಬಿರಯಿಯ ಚಿತ್ತಮಂ [5]ತಗುಳ್ದು[5] ನುಂಗಲೆ ಬಾಯ್ದೆಱೆವಂದದಿಂದದೇಂ
ಬಿರಿದುವೊ ತೋರಮಲ್ಲಿಗೆಗಳುಬ್ಬರಮಾಗಿ ಬಸಂತಮಾಸದೊಳ್ ೮

(ಲೀಲಾವತಿ೯-೧೦೪)

ಮಗಮಗಿಸಲ್ಕೆ ಮಂದಯಿಸಿ ದಿಕ್ತಟಮಂ ಬೞಸಲ್ಕೆ ಪೀರ್ವ ತುಂ
ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳೆಗಲ್ಕಿದೆ ಸಾಲ್ಗುಮೆಂದು ತ
ಳ್ತಗಲದಲಂಪಿನಿಂ ಮಧುಮನೋಭವರಿರ್ವರುಮುೞ್ತಿವಟ್ಟು ಮ
ಲ್ಲಿಗೆಗೆ ಬಸಂತದೊಳ್ ಬಯಸಿ ಕಟ್ಟಿದರೊಲ್ದಧಿರಾಜಪಟ್ಟಮಂ ೯

(ಆದಿ ಪುರಾಣಂ೧೧-೧೦೭)

ಎಕ್ಕಲದುಂಬಿಯಿಂ ಜವಳಿದುಂಬಿಯಿನಟ್ಟುವ ಮಾಲೆದುಂಬಿಯಿಂ
ದಿಕ್ಕುವ ಕುಂಭದಂತೆಸೆವ ಗೊಂದಣದುಂಬಿಯಿನಾವಮೆಯ್ಯೊಳಂ
ಮೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ
ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್ ೧೦

ಭುವನದೊಳೆಮ್ಮ ಮುಟ್ಟದಲರಾವುದೊಱಕೆಯ ಗಾಳಿ ಮುಟ್ಟೆ ಕಂ
ದುವುವೆಸೞರ್ಮೆ ಪೀರಲೋಡಮಾಗಳೆ ಸೋರ್ವುವು ಕಂಪು ಸೋಂಕೆ ಕಂ
ದವು ದಳಮೆಯ್ದೆ ಪೀರೆ ತವದುಣ್ಮುವ ಸೌರಭಮೆಂದು ಪೀರ್ದು ಪೀ
ರ್ದವಚಱದೇಂ ತೆಱಂದಿರಿದು ಪಾಯ್ದುವೊ ಕೇದಗೆಯೊಳ್ ಮದಾಳಿಗಳ್ ೧೧

(ಆದಿ ಪುರಾಣಂ೧೧-೧೨೦)

ಪಡೆದೊಡೆ ಕಂಪಂ ಬಣ್ಣಂ
ಬಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ

1 ವಸಿರಿ (ಅ) 2 ಕೂ (ಅ) 3 ಡೆ ನಲ್ಲರಂ ಬಿರಿಯಿಗಳಂ ಮನಂಬಿರಿಯೆ (ಅ) 4 ಥೇಷ್ಟದಿಂ ( ಖ ಬ)
5 ಬಿಂದು (ಅ)

ಪಡೆಯವ್ರುಱಿದಲರ್ಗಳೆರಡುಮ
ನೊಡೆವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ ೧೨

(ಆದಿ ಪುರಾಣಂ ೧೧-೧೧೮)

ಪೊಂಬೆಸದಿಂದಮೆಯ್ದೆ ಸಮೆದಂದದೊಳೊಪ್ಪುವ ಬಣ್ಣಮುಂ ಕರಂ
ಪಂಬಲಿಸಲ್ಕೆ ತಕ್ಕವಚೞೂಗಿಸದೋಗರಗಂಪುಮಾವ ಪೂ
ವಿಂ[1]ಬಗೆಗೊಳ್ವುದಂತ[1] ವಱೊಳಗ್ಗಳಮಾದೊಡಟಮಕ್ಕಟಾ ಮರು
ಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡವೊ ನಿರ್ನಿಮಿತ್ತದಿಂ ೧೩

(ಕಾವ್ಯಾಲೋಕನಂ ೨೩-೧೩೮)

ಗಱ್ಕನೆ ಕೊಳೆ ಕಡುಗಂಪಿನೊ
ಳಱ್ಕಮೆಗೊಳಗಪ್ಪೆವೆಂದು ಮಧುಪಂಗಳ್ ತಂ
ಮಱ್ಕಮೆ[2]ಯ ಭೀತಿಯಿಂದಮೆ[2]
ನಿಱ್ಕರಿಸಿದುವುಂಯರ ಚಂಪಕಕ್ಕೞಗದುವೇ ೧೪

(ಆದಿ ಪುರಾಣಂ ೧೧-೧೯)

ಮೊಗೆದುಣ್ಬೈ ಮಧುವಂ ಮಲೀನವಪು ದಾನಂಗೊಂಬೆ ಮಾತಂಗಜಾ
ತಿಗಳೊಳ್ ಪೇಸದೆ ಮಾೞ್ಪೆ ಪುಷ್ಪಿತಲತಾಸಂಭೋಗಮಂ ನಿನ್ನೊಳಾ
ವಗುಣಂ ಷಟ್ಪದ ಪೋಗು ಮುಟ್ಟಿದೆನುತಂ ಕೈಸನ್ನೆಗೆಯ್ವಂತೆ ಸಂ
ಪಗೆ ಚೆಲ್ವಾಯ್ತು ಸಮೀರಸಂಚರಣಸಂಚತ್ಪಲ್ಲವೋಲ್ಲಾಸದಿಂ ೧೫

ಅರಲಂಬಿಂದೆಮ್ಮೊಳ್ ಮೆ
ಯ್ಗರೆದಿಸು ಬಿರಯಿಗಳನೆಂದು ಕೈಗೊಟ್ಟುವುಶಂ
ಬರರಿಪುಗೆನ್ನದೆ ಮಾವಿನ
ತರುಗಳ್ ಕೈವಂದುವೆಂಬವರ್ ಮರುಳಲ್ತೇ ೧೬

(ಚಂದ್ರಪ್ರಭ ಪುರಾಣಂ ೭-೪೩)

ಅಳಿನಿನದ[3]ಗೀತ ಮದಕೋ
ಕಿಳನಿನದಂ ವಾದ್ಯಮಭಿನಯಂ[3]ನೆಗೞ್ವೆನೆಗಂ
ಲಳಿತಮನೇನಾಡಿಸಿದನೊ
ಮಳಯಾನಿಳಮನರ್ತಕಂ ಕತಾನರ್ತಕಿಯಂ ೧೭

(ಆದಿ ಪುರಾಣಂ ೧೧-೯೩)

ಏಣಿಯನಿಕ್ಕಿದೆಂ ನಿಮಿರ್ದ ಪೂಮರಗಳ್ಗೆ ವಿನೋದವಾಗಿ ನಿ
ಶ್ರೇಣಿಯನುಣ್ಮಳಲ್ಪುಳಿನ ಮಾಡಿಸಿದೆಂ ನೆಲೆಗೊಳ್ವ ನೀರ್ಗಳೊಳ್

---

1 ಬಗೆವಾಗಳಿಂತಿ (ಅ) 2 ಯೆಚೌತವಾಗಿರೆ (ಅ) 3 ದ ಮದಕೋಕಿಳ ಕಳಿನಿ ನದೆದ ಜತಿಯೊಳಭಿನಯಂ (ಅ)

ಜಾಣಮರ್ವಂತು ಖೇಡಕುೞಿಯಂ ಪರಿಶೋಧಿಸಿದೆಂ ಸರೋವರ
ಕೋಷ್ಣಿಗಳೊಳ್ ಕುಳಿರ್ಕೊಳಿಸುವೋಲಗಶಾಲೆಯನೊಪ್ಪಿ ಮಾಡಿದೆಂ ೧೮

ತರುಣೀಪಾದಪ್ರಹಾರಕ್ಕಸುಕೆ ಕುರವಕಂ ವಾರನಾರೀಕುಚೋದ್ಯ
ತ್ಪರಿರಂಭಕ್ಕಂಗನಾದೃಕ್ಷದವಿಗೆ ತಿಲಕಂ ಕಾಮಿನೀ ದುಗ್ಧ ಗಂಡೂ
ಷರಸಾಸ್ವಾದಕ್ಕೆ ಚಾಂಪೇಯಕಮೆಳಸಿ ಬರಲ್ವೇೞ್ಕೆ ನಿಮ್ಮಂ ಪಿಕಾ[1] ನೀ
ಕ ರವಂ ಮಂದಾನಿಲಂ ಬಿನ್ನವಿಸಿ ಕರೆದಪಂ ಸೌರಭಾ[2]ದರ್ಶ[2]ಹಸ್ತಂ ೧೯

(ಅನಂತನಾಥ ಪುರಾಣಂ ೮-೯೧)

ವಸುಧಾಮಂಡಳಮಂ ಮರುಳ್ಗೊಳಿಪ ರೂಪಾಶ್ಚರ್ಯದಿಂ ಮುತ್ತಿನೆ
ಕ್ಕಸರಂಮಲ್ಲಿಗೆ ಚಂದನಂ ಮೆಱೆಯೆ[3] ಚೆಲ್ವಿಂ ಕಂಪು ಸೊಂಪಾದ ಮೆ
ಯ್ವೆಸದಿಂ ಮನ್ಮಥ ಚಂದ್ರ ಚೈತ್ರರೆ ವನಕ್ರೀಡಾರ್ಥಮೆೞ್ವಂತಿರೇ
[4]ಟ್ವ[4]ಸಭಾಮಂಡಲದಿಂ ತ್ರಿವಿಷ್ಟಪಸಭಾಮಾಣಿಕ್ಯ ದೀಪಾಂಕುರಂ ೨೦

(ಅನಂತ ನಾಥ ಪುರಾಣಂ ೬-೯೨)

ಹಯಮಂ [5]ರಾಜಕುಮಾರರ[5]ಶ್ವ[6]ರಥ[6]ಮಂ ವಿದ್ಯಾವತೀವೃಂದಮಾ
ನೆಯನುರ್ವೀಶತನೂಜರಂದಣಮನಾ ವಾರಾಂಗನಾಶ್ರೇಣಿ ರಾ
ಣಿಯವಾಸಂ ಶಿಬಿಕೌಘಮಂ ಪಿಡಿಯ ಪಿಂಡಂ ಪೆಂಡವಾಸಂ ನೃಪಾ
ನ್ವಯ ಚೂಡಾಮಣಿ ಪಟ್ಟಗಂಧಗಜಮಂ ಮುನ್ನೇಱೆ ತಾಮೇಱಿದರ್ ೨೧

(ಅನಂತನಾಥ ಪುರಾಣಂ ೬-೯೩)

ಅರಸಿ ಪೊಗೆೞ್ದ ಮದವ
ತ್ಕರಿಧವಳಮನೇಱೆ ಮೆಱೆದನವನಿಪಧವಳಂ
ಶರದಂಬುದಮಂ ರೋಹಿಣಿ
ವೆರಸೇಱಿದ ಚಂದ್ರನಂತೆ ಪೂರ್ವಾಸದನೊಳ್ * ೨೨

(ಅನಂತನಾಥ ಪುರಾಣಂ ೬-೯೪)

ಬನಮಾಯ್ತಂಗಡಿಬೀದಿ ಪೀಲಿದಱೆಯೊಡ್ಡಿಂ[7]ಪಂಕಜಾಸ್ಯಂಗಳಿಂ[7]
ವನಜಾತಾಕರಮಾಯ್ತು ವಾರವನಿತಾಪಾಂಗಾಂಶುವಿಂ ಸೌಧಸಾ
ರನಿಕಾಯಂ ಮಧುಮಾಸಮಾಯ್ತು ಪುರಮೆಲ್ಲಂ ಮಲ್ಲಿಕಾಮಾಲೆ ಭಾ
ರನಿಜಾಮೋದದಿನೆಂಬಿನಂ ತಳರ್ದನೀರ್ಮಂಡಲಾಖಂಡಳಂ ೨೩

(ಅನಂತನಾಥ ಪುರಾಣಂ ೬-೯೫)

---

1 ರಾವ (ಅ) 2 ಹರ್ಷ ( ಖ ಬ) 3 ವ (ಅ) 4 ದರ್ು ( ಅ) 5 ನಾಗರ ಕಾದಿಯ (ಅ) 6 ಚಯ ( ಕ ಕ ಬ) 7 ಪುಲ್ಲಿದೊಂಗಲ್ಗಳಿಂ ( ಕ ಖ ಬ)★ ಈ ಪದ್ಯವಾದ ಮೇಲೆ (ಕ) ಪ್ರತಿಯಲ್ಲಿ ಬರುವ ಮೂರು ಪದ್ಯಗಳು ( ಖ ಬ) ಪ್ರತಿಗಳಲ್ಲಿ ೨೮-೨೯-೩೦ ನೆಯ ಪದ್ಯಗಳಾಗಿವೆ. (ಖ ಬ) ಪ್ರತಿಗಳ ಕ್ರಮವೇ ಸರಿಯಾಗಿರುವುದರಿಂದ ಆದನ್ನೇ ಇಲ್ಲಿ ಅನುಸರಿಸಿದೆ.

ಕುಮುದರಜಂಗಳೊಳ್ ಪೊರೆದು ವಾಃಕರಣಜಾಳಮನಾಂತು ಕೂಡಿ ವಿ
ಶ್ರಮಿಸಿ ತರಂಗಮಾಳಿಕೆಗಳೊಳ್ ಕಳಹಂಸನಿಕಾಯದೊಳ್ ಭ್ರಮ
ದ್ಭ್ರಮರ ರಜಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದ
ತ್ತ ಮದೋಸೆದಪ್ಪಿಕೊಂಡು ಕರೆವಂತೆವೊಲಾ ಮನುಜೇಂದ್ರ ಚಂದ್ರನಂ ೨೪

(ಕಾದಂಬರಿ ಪೂ. ಭಾ;೬೩೩)

ಸಮದೇಭವ್ರಜದಾನವರ್ಷನಬಲಾಸಂದೋಹನೇತ್ರಾಬ್ಜಷಂ
ಡಮನೇಕಧ್ವಜಮೇಘಡಂಬರಚಯಂ ಶುದ್ಧಾಂತಕಾಂತಾಮುಖೇಂ
ದುಮಯೂಖಂ ಚಮರೀಜವೀಜನಬಳಾಕಂ ತಳ್ತು ಕಾರುಂ ಬಸಂ
ತಮುಮುದ್ಯಾವನಕ್ಕೆ ಬಪ್ಪ ತೆಱದಿಂ ಬಂದಂ ಮಹೀವಲ್ಲಭಂ ೨೫

(ಅನಂತನಾಥ ಪುರಾಣಂ ೬-೯೬)

[1]ಮ[1]ಡದೊಂದೊತ್ತಿ ಮದಾಂಧಗಂಧಗಜಮಂ ಪಿಂತಿರ್ದ ನಲ್ಲಳ್ಗೆ ಕೈ
ಗುಡುತುಂ ಮೆಲ್ಲನಿೞಿಪಿ ಕಯ್ಯಲಗನತ್ತಲಕ್ ನೀಡಿ ಕುಂಭಾಗ್ರಮಂ
ತೊಡೆಯುತ್ತುಂ ಪಿಡಿದಗ್ರಪಲ್ಲವಮನುದ್ದಂತಾಗ್ರಮಂ ಮೆಟ್ಟಿ ಕೈ
ಯೆಡೆಯಿಂ ಲಂಘಿಸಿದಂ [2]ನೆ[2]ಲಕ್ಕೆ ಜವದಿಂ ಸಾಹಿತ್ಯರತ್ನಾಕರಂ ೨೬

(ಅನಂತನಾಥ ಪುರಾಣಂ ೬-೯೭)

ಸರಸಿರುಹಂಗಳಿಂದಿೞಿವ ಮತ್ತವ [3]ದಾ[3]ಳಿಗಳಂತೆ ಕೇಳಿಭೂ
ಧರಶಿಖರಂಗಳಿಂದಿೞಿವ ಸೋಗೆಯ ಗೊಂದಣದಂತೆ ಬಂದ ಮಾ
ಮರದದೆಳಗೊಂಬಿನಿಂದಿೞಿವ ರಾಜಶುಕಾವಳಿಯಂತೆ ತೇರ್ಗಳಿಂ
ಕರಿಣಿಗಳಿಂದಮಂದಣದಿನೇನಿೞಿತಂದರೊ ವಾರನಾರಿಯರ್ ೨೭

(ಅನಂತ ನಾಥ ಪುರಾಣಂ ೭-೩)

ಅಗೆವೊಯ್ದ ಚಂದ್ರಮಂಡಲ
ದಗೆಗಳವೋಲ್ ಕಾರಮುಗಿಲ [4]ಕೀೞ್ಗ[4]ರಿಗಳವೊಲ್
ಸೊಗಯಿಸಿದುವು ಬೆಳ್ಗೊಡೆ ಕೊಂ
ಬುಗೊಂಬಿನೊಳ್ ಕಂಬ ಕಂಬದೊಳ್ [5]ಪೆಣ್ಪೆ[5]ಡಿಗಳ್ ೨೮

(ಯಶೋಧಚರಿತ್ರೆ,೪-೪: ಅನಂತನಾಥ ಪುರಾಣಂ ೭-೬)

ಎಳಲತೆಗಳ್ಗೆ ಸೋಗೆಗೆ ಸರೋಜಕುಲಕ್ಕೆ ಪಕಕ್ಕೆ ತಮ್ಮ ತೋ
ಳ್ಗಳ ಕುಡಿ ನೀಳ್ದ ಸೋರ್ಮುಡಿ ಮೊಗಂ ಗುಡಿ ಮೆಲ್ನುಡಿ ಮತ್ಸರಂಗಳಂ
ಬಳೆಯಿಸೆ ಮುತ್ತುವಂತೆ ಬನಮಂ ನಡೆದರ್ ಕಳನಾದೆಯರ್ ಸಮು
ಜ್ವಳಮುಖಬಿಂಬೆಯರ್ ಕುಟಿಲಕುಂತಳೆಯರ್ ವಿಚಳಲ್ಲತಾಂಗಿಯರ್ ೨೯

(ಅನಂತನಾಥ ಪುರಾಣಂ ೭-೭)

---

1ತೊ(ಅ) 2ಕೆ (ಅ)3ರಾ(ಅ)4ಕೀಳ್ವಿರಿ(ಕ ಬ) 5ಪೆರ್ವಿ (ಅ)

ಪರಿತಂದುತ್ಸಾಹದಿಂದರ್ಚಿಸಿದರೊಸೆದು ವಾಸಂತಿಯಂ ಸಾಂದಿನಿಂ ಮಾ
ಮರನಂ ಶ್ರೀಖಂಡದಿಂ ಮಲ್ಲಿಗೆಯನಗುರುವಿಂ ಚಂಪಕಾನೀಕಮಂ ಕ
ತ್ತುರಿಯಿಂ ಕಂ[1]ಗಲ್ಲಿಯಂ[1]ಕಂಪಿಡಿದ ಕ[2]ಮಳ[2]ದಿಂ ನಾಗಮಂ ನೆಲ್ಲಿಯಿಂ ಪಾ
ದರಿಯಂ ಕಾಶ್ಮೀರದಿಂ ಕೇಸರಮನಮಲಜರ್ಪೂರದಿಂ ಕಾಂತೆಯರ್ಕಳ್ ೩೦

(ಲೀಲಾವತಿ ೧೩-೬೪)

ಕುಸುಮಶರಾಸನಕ್ಕೆ ನನೆಯಂಬಿನ ತೆಕ್ಕೆಗೆ ಮೀನಕೇತನ
ಕ್ಕಸಮ ಶಿಳೀಮುಖಕ್ಕೆ ರತಿಗೇಳಿಗಿವೆಂದರೆ ನೋಡಿ ಮೆಚ್ಚಿ ಜಾ
ನಿಸಿ ಕರಪಲ್ಲವಂ ಬಡುಗೆ ಬಾಯಿನ ಬಲ್ಲನೆ ಮೊಗ್ಗೆ [3]ಜಾ[3]ಗರಲ್
ಪಸರಿಸೆ ಕೊಯ್ದು ಮಲ್ಲಿಗೆಯೊಳರ್ಚಿಸಿದರ್ ಸಹಕಾರಪಾದಮಂ ೩೧

(ಅನಂತನಾಥ ಪುರಾಣಂ ೭-೧೨)

ಅರ್ಚಿಸಿದಾಯಲಾಗ ಪೊಸಪೂಗಳನೆಂದಿದೆ ಚಂದನಚ್ಛ[4]ಟಾ[4]
ಚರ್ಚೆಗಳೆಂಬವೋಲಡಸಿ ನೋಡಿ ನವಾಂ[5]ಕುರಕಾಂತಿದಾಮದಿಂ[5]
ದರ್ಚಿಸುವಂತೆ ನೀಡಿ ನಳಿತೋಳನಲಂಪಿನೊಳಾಯ್ದು ಕೊಯ್ದು ಕೈ
ಮರ್ಚಲ ತೋರಮಲ್ಲಿಗೆಗಳಂ ತಳಿರ್ವಟ್ಟಲೊಳೊರ್ವಳೊಟ್ಟಿದಳ್ ೩೨

(ಲೀಲಾವತಿ ೧-೬೬)

ವದನದ ಕಂಪನೊರ್ಮೆ ಸೆಳೆಗೊಂಬಿನ ಪೂಗಳನೊರ್ಮೆ ಸೂೞಿಸೂ
ೞದೆ ಮುಸುಱುತ್ತಮಿರ್ಪ ಮೞಿದುಂಬಿಯನೀಯದೆ ಸುಯ್ಯೆ ನಾಸಿಕಾ
ವಿದಳಿತ ಚಂಪಕಶ್ವಸಿತ ಸೌರಭಮೊರ್ವಳಪೂರ್ವರೂಪಿನಾ
ಗದನಗೆವೂಗಳಂ ಬಯಸಿ ಬೆಚ್ಚದೆ ಬಿಚ್ಚತಮಾಯ್ದಳೞ್ತಿಯಿಂ ೩೩

(ಲೀಲಾವತಿ ೧೩-೬೭)

ನಡೆ ತಣ್ಪೂತಮರಂಗಳಂ ನೆರೆಯ ಭಾಷಾನಿಸ್ವನಂ ಪೊಣ್ಮೆ ಸಾ
ರ್ದಡಗೈ ಬಾಗಿಸೆ ಶಾಖೆಯಂ ಬಲದ ಕೈ ಬೈತಿಟ್ಟವೋಲೆಯ್ದೆ ಕೆಂ
ಪಡರ್ವನ್ನಂ ಕರಪಲ್ಲವಾಂಗಿಲಿಗಳಿಂ ಘರ್ಮಾಂಬುವಂ ಮಿಂಚೆ ಪೂ
ದೊಡವಿಂಗೆಂದು ಬೆಡಂಗಿಯರ್ ಬಿಡದೆ ಪೂವಂ ಕೊಯ್ದರುದ್ಯಾನದೊಳ್ ೩೪

ನಿಮಿರ್ದುದು ಮಧ್ಯಮುಂ ತಿವಳಿ ಕೆಟ್ಟವು ತೋಳ್ ಮೊಲೆ ಕುಂತಳಾಳಿ ಕ
ಣ್ಣೆಮೆ ಕುಡಿವುರ್ವು ಮೇಗೆ ನೆಗೆದೊಪ್ಪಿದುವೊಳ್ಮುಡಿ ಬಿಟ್ಟುವಿತ್ತ ಕಂ
ಪಮನೊಳಕೊಂಡವೂರು ತುದಿಕಾಲ್ ನೆಲೆಗೊಂಡವು ನೂಪುರಂ ನಿನಾ
ದಮನೊಳಕೊಂಡವಿಂತಬಲೆ ಪೊದಿಱಿದಳ್ ನಿಮಿರ್ದಳೈಗೊಂಬಿನೊಳ್* ೩೫

---

1 ಕೇಳಮಂ(ಅ) 2 ಳಭ(ಅ) 3 ಮೋ (ಕ ಖ ಬ) 4 ದಾ (ಕ ಖ ಬ) 5 ತರತಾಂತದಾಮದಿಂ (ಕ ಖ ಬ)★ ಈ ಪದ್ಯಗಳು ( ಕ) ಪ್ರತಿಯಲ್ಲಿಲ್ಲ

ವಳಿಗಳೞ್ಯೆ ಬಿಂಕಂಬೆತ್ತ ವೃತ್ತಸ್ತನಂ ಕಂ
ಗೊಳಿಸೆ ಪೊಳೆಯೆ ಬಾಹಾಮೂಲಮೂರುದ್ವಯಂ ಸಂ
ಚಳಿಸೆ ನಿಜಪದಾಂಗುಷ್ಠಾಗ್ರದಿಂ ನಿಂದು ಕಣ್ಗಳ್
ಪೊಳೆಯೆ [1]ಮಿಳಿರ್ವ[1]ಕೊಂಬುಂ ನಿಳ್ಕಿ ಪೂಗೊಯ್ವಳೊರ್ವಳ್* ೩೬

(ಕಾವ್ಯಾವಲೋಕನಂ ೬೧)

ಪರಿಮಳಿತರಂಜಿತಂ ಬಂ
ಧುರಗಂಧಂ ಮಂದರಾಗವರ್ಧನಕರಮೀ
ಮರುಗಂ ಕರ್ಬಾಳಮುಮಿರೆ
ಮರುಳಲ್ಲವೆ ಕುಸುಮನಿಚಯದೊಳ್ ಮೆೞ್ವಳಿಗಳ್ ೩೭

ಬಂಬಲ್ಗುರುಳೊಡನಾಡಿಗೆ
ತುಂಬಿಗೆ ಪಗೆಯೆಂದು ಮುಳಿದು ಸಂಪಗೆಯೆಸೞಂ
ತುಂಬಿಗುರುಳ್ಗೊಪ್ಪಿಸಿದಪ
ಳೆಂಬಿನಮೆಸುೞ್ಗಳನೆ ತೀೞ್ದು ಸೂಡಿದಳೊರ್ವಳ್ ೩೮

(ಅನಂತನಾಥ ಪುರಾಣಂ ೭-೧೪)

ಪರಭಾಗಂ ಪೊಣ್ಮುವನ್ನಂ ತನುಲತೆ ಲತೆಯೊಳ್ ಕೂಡೆ ತುಂಗಸ್ತನಂ ಮಂ
ಜರಿಯೊಳ್ ಮುಂಡಾಡೆ ಕಣ್ಗಳ್ ಬೆರಸೆ ಕುಸುಮದೊಳ್ ಕುಂತಳಂ ತುಂಬಿಯೊಳ್ ತ
ಳ್ತಿರೆ ಪುಷ್ಪಾಮೋದದೊಳ್ ಸುಯ್ ಕಲಸೆ ಕರತಳಚ್ಛಾಯೆ ತಳ್ಕೈಸೆ ಬಾಲಾಂ
ಕುರಮಂ ಪೂಗೊಯ್ದಳೊರ್ವಳ್ ಲತೆಲತೆಗೋಲವಿಂ ಬಿರ್ದು[2]ವಂದಂತಿರಿರ್ದಳ್[2] ೩೯

(ಲೀಲಾವತಿ ೧೩-೭೦)

ಸೋದು ಕರಾಬ್ಜದಿಂ ಮುಗಿದ ಕಣ್ಮಲರಂ ಕಚಭಾರಬಂಧಮಂ
ಸೋದಿಸಿ ಮೇಲುದಂ ಬಿದಿರ್ದು ಕುಂತಳಮಂ ಸಮಸಂಶಯಕ್ಕೆ ತಂ
ದೂದಿ ತಗುಳ್ದು ಬೆಂಬೞಿಯನೆಯ್ದಿಸಲಾಱದೆ ಕಾಯ್ವ ಮಲ್ಲಿಕಾ
ಮೋದ ಮಧುವ್ರತಕ್ಕಗಿದು ವಿಭ್ರಮಮಂ ಪಡೆದತ್ತು ಸಂಭ್ರಮಂ ೪೦

ನಱುಸುಯ್ಗೆ ತುಂಬಿಗಳ್ ಬಂ
ದೆಱಗೆ ಕರಾಂಬುಜದೆ ಕಮಲಮುಖಿ ಸೋವುತ್ತುಂ
ಮಿಱುಗುವ ನೀಲದ ಬಟ್ಟಿನ
ತಿೞ್ಕಲ್ಗಳನಾಡುವಂತೆ ಸತಿ ಸೊಗಯಿಸಿದಳ್ ೪೧

(ಕಾದಂಬರಿ, ಉ.ಭಾ. ೨೬)

---

1 ನಿರ್ಮಿದ (ಅ) 2 ದೆಂಬಂದೆದಿಂದಂ (ಕ ಖ ಬ) ★ ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ನೀರೇಜವದನೆ ತಿಱಿದಳ್
ತೋರಿದ ಮಲ್ಲಿಗೆಯ ಮುಗುಳನಾಗಳೆ ಕಾಶ್ಮೀ
ರಾರುಣಕರಪಲ್ಲವದಿಂ
ತಾರಗೆಯಂ ತಿಱಿವ ಪೂರ್ವಸಂಧ್ಯಾಂಗನೆವೋಲ್ ೪೨

(ಲೀಲಾವತಿ ೧೩-೭೭)

ಪೂಗಣೆಯನ ಚಾಮರಮಂ
ಸೀಗುರಿಯಂ [1]ಪಿಡಿ[1]ವಳಂತೆ ಸೆಳೆಗೊಂಬುಗ[2]ಳಂ[2]ತೆ
ಬಾಗೊತ್ತಿ ಗುಜ್ಜುಮಾವಿನ
ಪೂಗೊಂಚಲನುಡಿದು ಪಿಡಿದಳಳಿವೆರಸೊರ್ವಳ್ ೪೩

(ಲೀಲಾವತಿ ೧೩-೮೨)

ಎಳಲತೆಯನಂಮ[3]ಗ[3]ದಿಂ ಕೋ
ಕಿಳಮಂ ಕಳರವದಿ[4]ನಿಕ್ಕಿ[4] ಗೆಲೆಯಲರ್ವಳೆಯಂ
ತ[5]ಳೆದಳ್[5]ನೆ ನಿಳ್ಕಲಾಱದೆ
ಸೆಳೆಗೊಂಬಮ ಲಲನೆಯಲುಗೆ ಸೂಸಿದವಲರ್ಗಳ್ ೪೪

(ಲೀಲಾವತಿ ೧೩-೮೬)

ವಲ್ಲಭನ ತೋಳ ಸೋಂಕುಂ
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ
ನೊಲ್ಲೆಂ ಪೊಱತನೆನುತ್ತುಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ದುಳದೊರ್ವಳ್ ೪೫

(ಜಗನ್ನಾಥ ವಿಜಯಂ ೧೪-೭೭)

ಮರುಳೊಡನಾಡಿದ ಕತದಿಂ
ಮರುಳಾದನದಲ್ಲದಂತದಂ ಸೂಡನೆ ಶಂ
ಕರನೆಂದು ಕೊಯ್ದುಳೊರ್ವಳ್
ಪರಿಮಳಮಂ ಬೀಱುತಿರ್ಪ ಪೊಂಗೇದಗೆಯಂ ೪೬

(ಜಗನ್ನಾಥ ವಿಜಯಂ ೧೪-೮೪)

ಅಳಿ ಕರ್ದುಕಿದ ಕಡೆಗಂಗಳ
ಗಿಳಿ ಕರ್ದುಕಿದ ದಶನವಸನದುನ್ಮದದ ಪಿಕಾ
ವಳಿ ಕರ್ದುಕಿದ ಬೆರಲ ಲತಾ
ಲಲಿತೆಯರೆ ಪಲಂಬರಾದರಲರ್ಗೊಯ್ವೆಡೆಯೊಳ್ ೪೭

---

1ಪಡೆ (ಖ ಬ) 2 ಳಿಂ (ಅ) 3ದ (ಅ) 4ನಾಕೆ(ಅ) 5ಳಿದುದೆ(ಅ)

ಸುರಹೊನ್ನೆಯ ಮುಗುಳಂ ಕೊ
ಯ್ದರವಿಂದದ ನೂಲೊಳೊಪ್ಪೆ ಕಟ್ಟಿದಳೊರ್ವಳ್
ಪರಿಮಳಮುಳ್ಳೆಲಮುತ್ತಿನ
ಸರಮೆತ್ತಣದೆಂದು ಮುಗ್ಧೆಯರ್ ಮುತ್ತುವಿನಂ ೪೮

(ಅನಂತನಾಥ ಪುರಾಣಂ ೭-೨೦)

ಕಟಿಸೂತ್ರಂ ಬ್ರಹ್ಮಸೂತ್ರಂಸರಿಗೆ ಮಿನುಕು ಕೊಪ್ಪುಂಗುರಂ ಕರ್ಣಪೂರಂ
ಕಟಕಂ ಮಂಜೀರಕಂ ಮೂಕುತಿ ಚಳಕಿಗೆಪೂ ಪೊಂದಳಿರ್ ಪಾಯವಟ್ಟಂ
ನಿಟಿಲಾಂ[1]ತಂ[1]ಲಂಬಳಂ ಪೊಬಳೆ ಬಳೆ ಪೞಿಕೇಯೂರಮೆಂಬನ್ನವಂಪ್ರ
ಸ್ಫುಟರ[2] (ತ್ನೋ)[2] ಪಾಶ್ರಯಂ ರಂಜಿಸುವಿನಮಲರಿಂ ಕಾಂತೆಯರ ಮಾಡಿ ತೊಟ್ಟರ್ ೪೯

ಬಳೆ ಮುದ್ರೆ ಬಂದಿ ಪುಟ್ಟಿಗೆ
ಬಳಸದ ಬಿಚ್ಚೋಲೆ ಹರಿಹು ಹೞಿತಿಲಕಂ ಕಂ
ಗಳನಲಸದೆ ಕೇದಗೆವೂ
ಗಳೊಳೆತ್ತಂ ಮಾಡಿ ತೊಟ್ಟರಬಲೆಯರೆಲ್ಲಂ ೫೦

ಪೊಸತಿಕ್ಕುವಂತೆ ಕಾಮನ
ಪೊಸನಿಧಿಯಂ ಕಾಮಕಾಳಸರ್ಪಂಗೊಲವಿಂ
ಪೊಸಮಲ್ಲಿಗೆಯುಮನಡಕೆಯ
ಸಸಿಯುಮನೊಸೆದೊರ್ವಳಿಕ್ಕಿದಳ್ ಸೋರ್ಮುಡಿಯೊಳ್ ೫೧

(ಲೀಲಾವತಿ ೧೩-೧೦೮)

ತೊಡವೆನಿತೊಳವನಿತಕ್ಕಂ
ಪಡಿಚಂದಂ ಮಾಡಿ ಕಾಂತೆಯರ್ ಪೂದೊಡವಂ
ತೊಡೆ ತೊಟ್ಟ ಮರಲಸರಳಂ
ಮಡಲಿಱಿದು ಮನೋಜನಡಸಿ ವಿರಹಿಯನೆಚ್ಚಂ ೫೨

ವನಕೇಳೀಲೀಲೆ[3]ಯೊಳ್[3]ತನ್ನಿನಿಯನ ದಯೆಯಿಂ ಪೆತ್ತ ನೂತ್ನೋತ್ಪಲಾಂಭೋ
ಜನವೋತ್ತಂಸಾವತಂಸಂಗಳನಭಿನವಪುನ್ನಾಗಕೇಯೂರಮಂ ನೂ
ತನ ಚಂಚತ್ಕರ್ಣಿಕಾರಪ್ರಸವವಲಯಮಂ ಮಲ್ಲಿಕಾಕುಟ್ಮಲವ್ಯ
ಕ್ತನವೋದ್ಯದ್ಧಾರಮಂ ಕಾಮಿನಿ ತಳೆದೆನಸುಂ ನೋಡೆ ಕಣ್ಗೆಡ್ಡಮಾದಳ್ ೫೩

(ಶೃಂಗಾರ ರತ್ನಾಕರಂ ೧-೩೭)

ಎಳಲತೆಯುಯ್ಯಲಾಡಿದಪುದೆನ್ನಸಿತೋತ್ಪಲಮುಯ್ಯಲಾಡಿತೆ
ನ್ನೆಳದಳಿರುಯ್ಯಲಾಡಿದುದು ತೆಂಬೆರಲೆಂಬೆ[illegible]ಂದಮೆನ್ನುತಂ

---

1ಕಂ (ಕ) 2ನ್ನೋ (ಕ ಖ ಬ) 3 ಯಿಂ (ಕ ಖ ಬ)

ಕೆಳದಿಯರೊಲ್ದು ಪಾಡೆ ತನುಮಧ್ಯ ವಿಲೋಲ[1]ವಿನೀಲ[1] ನೇತ್ರೆ ಕೆಂ
ದಳದ ಬೆಡಂಗನಿಕ್ಕಿ ತಳಿರುಯ್ಯಲನಾಡಿದಳಾಮ್ರಶಾಖೆಯೊಳ್ ೫೪

(ಅನಂತನಾಥ ಪುರಾಣಂ ೭-೧೫)

ತಳಿರುಯ್ಯಲ್ ಕಣ್ಗೆವಂದತ್ತೆಳಅಡಕೆಯ ಕಂಭಗಳಿಂ ಕಂಜಸೂತ್ರೋ
ಜ್ವಳ[2]ರಜ್ಜು[2]ಬ್ರಾಜಿತಂ ಚಂದನದ ಮಣೆಯಿನುನ್ಮತ್ತಭೃಂಗಾಂಗನಾಮಂ
ಗಳಗೀತೋನ್ಮಾ[3]ದಿ[3] ಮೇಗೇಱಿಸಿದ ಕೃತಕನೃತ್ಯನ್ಮಯೂರಂಗಳಿಂ ನಿ
ರ್ಮಳಮಾಳಾಚಾಮರಂ ಚಂಪಕಮುಕುಳಚಲದ್ಘಂಟಿಕಾಜಾಳದಿಂದಂ ೫೫

(ಲೀಲಾವತಿ ೧೧-೫೭)

ಎಳಸಿರೆ ದೇಸಿ ಪೊಚ್ಚಪೊಸಮಲ್ಲಿಗೆಯಂ ಪಲವಂ ತುಱುಂಬಿಕ
ಣ್ಗೊಳೆ ಸಿರಿಕಂಡದಣ್ಪನೊಸೆದಿ[4]ಟ್ಟು[4]ದುಕೂಲಮನುಟ್ಟು ಮೌಕ್ತಿಕಾ
ವಳಿಯನೊಱಲ್ದು ತೊಟ್ಟು ತಳಿರುಯ್ಯಲನ[5]ೞ್ಕಱೊ[5]ಳೇಱಿ ಪಾಡಿದಳ್
ಲಲನೆ ವಸಂತದೊಳ್ ಪಲವು ವರ್ಣ[6]ನ[6]ದಿಂ ಕವಿಕಾಮದೇವನಂ ೫೬

(ಶೃಂಗಾರ ರತ್ನಾಕರಂ ೧-೪೦)

ತೆರೆಮುಗಿಲನಡರ್ವ ವಿದ್ಯಾ
ಧರಿಯೆಂಬಿನದೊರ್ವಳೇ[7]ಱಿ[7] ಕೃತಕಾದ್ರಿಯನೇಂ
ದೊರೆಯಾದಳೊ ರತಿಕಾಂತನ
ಕರುಮಾಡದ ಮದನಮೋಹಿನೀಪುತ್ರಿಕೆವೋಲ್ ೫೭

(ಅನಂತ ನಾಥ ಪುರಾಣಂ ೭-೧೬; ಯಶೋಧ ಚರಿತೆ ೪-೯)

ನಿಱಿದಳಿರ್ದೊಣಂಗಲಂ ತೆಗೆದು [8]ಬಾರುಳಿ[8]ಯಂ ದನಿಗೆಯ್ದಶೋಕೆಯೊಳ್
ಕಱಿಮುಗು[9]ಳ್ಗುಂಜಿ[9]ಯಂ ತಳೆದು ಪೂವಿನ ಬಲ್ಮೊನೆಯಂಬು ಕೈಯೊಳ
ಚ್ಚಱಿದಿರೆ ಮೇಚಕಚ್ಛವಿಯ ತಾವರೆಗಂಗಳ ಗಾಣವೆಂಗಳೇಂ
ಮೆಱೆದರೊ ಕೇಳಿಶೈಲಶಿಖರಾವಳಿಯೊಳ್ ಶಬರೀವಿಲಾಸಮಂ ೫೮

(ಅನಂತ ನಾಥ ಪುರಾಣಂ ೭-೧೭)

ಸೊಗಯಿಪ ಬಳ್ಳಿ ಮಾವನಡರ್ದೇಱಿ ತಳಿರ್ಪುದಿದಿರ್ದ ಕೊಂಬುಕೊಂ
ಬುಗಳೊಳಡಂಗಿ ತುಂಬಿಯವೊಲಾಣತಿಮಾಡಿ ಶುಕಾಳಿವೊಲ್ ಕೊದಳ್
ಬಗೆವುಗೆ ಮಾತನಾಡಿ ಪಿಕದಂತೆ ಪುಗಿಲ್ ಪುಗಿಲೆಂದು ಭೂಪನಂ
ನಗಿಸಿದರಲ್ಲಿ ಜವ್ವನದ ಸೊರ್ಕಿನಳುರ್ಕೆಯ ನೀಱೆಯರ್ ಕೆಲರ್ ೫೯

---

1 ವಿಲೋಲ ( ಕ ಖ ಬ) 2 ರಾಜಿ (ಕ ಖ ಬ) 3 ದ ( ಖ ಬ) 4 ಕ್ಕಿ ( ಅ) 5 ಱ್ತಿಯೊ ( ಅ) 6 ಕ ( ಅ)
7 ಱಿ (ಕ) 8 ಚಾರಿಣಿ ( ಕ ಖ ಬ) 9 ಳಂಜೆ ( ಕ ಖ ಬ)

ನಿಱಿ ಸೊಪ್ಪಾದುದು ಕೋಡಗಂ ಸೆಳೆದುದೇ ಮೈ ಬಾಸುಱಿೞ್ವಿನ್ನೆಗಂ
ಪಱಿದತ್ತಕ್ಕಟ ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್
ತುಱಿಗಲ್‌ಗೊಂಡವು ತಂಗೆ ಬಲ್ಲಿತೆ ಬಿಸಿಲ್ ಪೂದೋಂಟದೊಳ್ ನಿನ್ನನೆಂ
ದಱಿದುತ್ಸಾಹಿಯಳಂಕೆಗೆಯ್ದು ಸಖಿಯಂ ತನ್ವಂಗಿ ಕ[1]ಣ್ಬೇ[1]ಱಿದಳ್ ೬೦

ಎಳಮಾವಿನ ತಳಿರ್ವೂವಿನ
ಗಿಳಿ ಚಿಲಿಪಿಲಿಯೆಂದೊಡಾ ಮರಂ ಜಗಳಕ್ಕ
ವ್ವಳಿಸಿದಪುದೆಂದು ಭಯದಿಂ
ತಳಿರ್ಗೊಯ್ಯ[2]ದೆ[2]ಪಿಂಗಿ ಮುಗ್ಧೆ ನಗಿಸಿದಳೊರ್ವಳ್ ೬೧

ಗಿಳಿ ಸೆಳೆಯೆ ತಳಿರನೆಲೆವಱಿ
ಗಳ ಕಾಯ್ಗಳ್ ಪೊಳೆಯೆ ಚೂತಲತೆ ಪೋಲ್ತತ್ತಂ
ಚಳಮನಳಿಪಿಂದಲಿನಿಯಂ
ಸೆಳೆಯೆ ಕುಚಂ ಪೊಳೆಯೆ ಮುರಿದು ನಿಂದಂಗನೆಯಂ ೬೨

ಕುರುವಕಮಂ ಘನಸ್ತನದ ಸೋಂಕಿನೊಳುಳ್ಳಲರ್ವಂತಿರಾಳಿಯಂ
ಕರುವಿಡೆ ಕೂಡೆ ಕಂಡು ದರಹಾಸದಿನಾಕೆಯ ಚಿತ್ತವಲ್ಲಭಂ
ಪುರುಡಿಸಿ ಕಯ್ಯೊಳಿರ್ದ ಸರಸೀಜಮನಂಟುಮಗುಳ್ಚಿ ಬೆರ್ಚಿ[3]ತಾ
ವರೆಯೆಸಱೊಟ್ಟ[3]ನಿಟ್ಟಸುಕೆಯೊ[4]ಳ್ಮಿಳಿರಲ್[4]ಪಡೆದಳ್ ಪ್ರಸಾದಮಂ ೬೩

(ಅನಂತನಾಥ ಪುರಾಣಂ ೭-೧೯)

ತರಳಾಪಾಂಗದಿನ ನೃಪಾಲತಿಲಕಂ [5]ಮೈವೆತ್ತರಲ್ದುಂ ಪ[5]ಯೋ
ಧರಸಂಘಟ್ಟದೆಕಾಮು[6]ಕಾಕು[6]ರವಕಂ ಸೊಂಪೇಱಿವಾಮೇತರೇ
ತರಪಾದಾಹತಿಯಿಂದಶೋಕನೊಲವಿಂದಂ ತಳ್ತು ಸಂತಂ ನಿರಂ
ತರಮುದ್ಯಾನವಿನೋದಮಂಸಲಿಸುವಂ ಭೂಕಾಂತನಾ ಕಾಂತೆ[7]ಯೊಳ್[7] ೬೪

(ಅನಂತನಾಥ ಪುರಾಣಂ ೨-೧೮)

ದಳಿತಾಂಭೋಜಾತವಕ್ತ್ರಶ್ವಸಿತಪರಿಮಳಂ [8]ಬ್ರೂಕತಾ[8]ಕ್ಷೇಪಲೀಲಾ
ವಳಿತಾಪಾಂಗಾನುರಾಗಂ ಮಧುರಫಳರಸಾಸ್ವಾದ್ಯಹೃದ್ಯಧರಂ ಕೋ
ಮಳೆಯೊಳ್ ಸಂಭೋಗದೊಳ್ ಸಂಧಿಸೆ ನೃಪನ ಮನೋಜಾತಕೀರಂ ವಚಃಕೋ
ಕಿಳಮಾಲೋಕದ್ವಿರೇಫಂ ತಣಿವುವೆಳಸಿ ತತ್ಪ್ರೇಮಕಾಂತಂ[9]ನಿತಾಂತಂ[9](?) ೬೫

(ಅನಂತನಾಥ ಪುರಾಣಂ ೨-೧೭)

---

1 ಣ್ಬೇ (ಖ ಬ) 2 ಲೆ ( ಖ ಬ) 3 ಕಾತರೆತಳಿರ್ವೊಟ್ಟ(ಅ) 4 ಳ್ದಳಿರಂ (ಅ) 5 ಮುಯ್ಯಾಂತರಲ್ದುತ್ವ(ಅ) 6 ಕೋತ್ಕು (ಅ) 7 ಯಂ (ಅ) 8 ಕೋರಕಾ ( ಕ ಖ ಬ) 9 ವಸಂತಂ (ಅ)

ಗಳದೊಳ್ ತೋಳಮೊದಲ್ ಪಳಂಚೆ ಕಟಿಯೊಳ್ ವೃತ್ತೋರು ತಳ್ಪೊಯ್ಯೆಪೆ
ರ್ಮೊಲೆ ವಕ್ಷಃಸ್ಥಲಮಂ ಪ[1]ಳಂಚಲೆಯೆ ತೂಱ[1]ಲ್ಗೊಂಬಿನೊಳ್ ತೋರ್ಪ ಗೊಂ
ಚಲ ಪೂವಿಂಗೆ ಲತಾಂಗಿ ನಿಳ್ಕುವಿನಮೋಪಂ ಲೀಲೆಯಿಂದೆತ್ತಿ ವೃ
ಕ್ಷಲತಾಲಿಂಗನಭಂಗಿಭಾವರಸಮಗ್ನಸ್ತಂಭಮಂ ತಾಳ್ದಿದಂ ೬೬

(ಅನಂತನಾಥ ಪುರಾಣಂ ೭-೧೮)

ಸ್ತನಮುರ[2]ದೊಳು[2]ರ್ಚಿತೆನೆ ಮಿಗೆ
[3]ಮೊನಸಿದ[3]ಮ್ಮೈನವಿರೆ ದಾಂಟಿತೆನೆ ಕೊಂಬಿನ ಪೂ
ವನೆ ತೋಱಿ ತಿಱಿಯಲ[4]ತ್ತಿದ[4]
ತನು [5]ಬಿರಿವಿನಮಪ್ಪಿ ವಲ್ಲಭಂ[5] ನವಮಧುವಂ ೬೭

(ಲೀಲಾವತಿ ೧೩-೯೬)

ಅನುವಿಸಿ ನನೆದಿಱಿದಪೆನೆಂ
ದಿನಿಯಂ[6](ಬರೆ ಕಂಡು)[6]ತೋಳನೆತ್ತದೆ ಕುಚಕಂ
ಬನ[7]ಖಾಂಕ[7]ದತ್ತ ಲಜ್ಜಾ
ವನತಾನನೆ ನಿಂದ ಭಾವಮಂ ಬಯಸದರಾರ್ ೬೮

(ಲೀಲಾವತಿ ೧೩-೯೮)

ಎಡಗಯ್ಯೊ[8]ಳೊ[8]ಯ್ದು ಮೇಲುದು
ಸಡಿಲ್ದು ಬರೆ[9]ಬದಿಗೆ ಬಳೆದು[9] ನವನಖಪದಮಂ
ಬಿಡುಮುಡಿ ಮುಸುಂಕೆ ಮುಱಿದೇ
ನುಡಿದಳೊ ಕುಡಿದಳಿರನಲಘುಕುಚೆ ಪತಿಯಿದಿರೊಳ್ ೬೯

(ಲೀಲಾವತಿ ೧೩-೯೯)

ಒಂದು ಕುಚಮುರ[10]ಮನು[10]ರ್ಚಿರೆ
ಚಂದನಧವಳಿತನನಪ್ಪಿ ಪುಗೊಯ್ದಳ್ ತ
ಳ್ತಿಂದುಧರನಂಗದಿಂ ಮುಳಿ
ಸಿಂದಂ ಮಿಗೆ ಮುರಿದು ಮಗುಱಿ ಗಿರಿಜೆ ವೊಲೊರ್ವಳ್ ೭೦

(ಲೀಲಾವತಿ ೧೩-೧೦೨)

ಕರಮೆಸೆದವು ಲತೆಗಳನೆ
ಟ್ಟಿರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್
ಸಿರಿಖಂಡದ ವಳಯಂ ಕ
ಪುರಪರವಳುಕಿನ ಜಗಲಿ ಕೇತಕೀರಜದ ಮುಱಿಲ್ ೭೧

---

1 ಳಂಂಕೆ ತಿಱಯಲ್ ವೇ(ಅ) 2 ಮನು(ಕ ಖ ಬ) 3 ಮನಸಿಜ (ಅ) 4 ತ್ತನೆ (ಅ) 5 ಬಿಗಿವಿನಮಪ್ಪಿಯಭಿಮತಂ(ಅ) 6 ತರೆಬಂದು (ಆಕ) ಕರೆಬಂದು (ಖ ಬ) 7 ಲೋಕ (ಖ ಬ) 8 ಳಾ (ಕ ಖ ಬ) 9 ಬರಿಗೆ ಬಳೆದು (ಅ) ಬದಿಗಬಳೆ (ಖ ಬ) 10 ದೊಳು (ಅ)

ಬಿಸಿಲೆಯ್ದೆ ಪಸಲೆಗವಿದುದು
ಪಸುರ್ವೆಳ[1] ಗಿಂದೆ[1] ನಿಪ ಬಾಳಕದಳೀವನ[2] ದೊಳ್[2]
ಬಿಸರುಹದಳಂಗಳಿಂದಂ
ಮಿಸುಕದ ಹಿಮಗೃಹಮನವನಿಪಾಲಂ ಕಂಡಂ ೭೨

(ಕಾದಂಬರಿ ಉ. ಭಾ; ೨೯೯)

ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂಧುವಾ
ರದ ಚಮರೀಜದಿಮ ಕುಮುದದುಜ್ವಲಮಾಲಿಕೆ[3] ಯಿಂದೆ[3] ಪುಂಡರೀ
ಕದ ಕಿಱುಗಂಟೆಯಿಂದೆ ಸಹಕಾರದ ಕೆಂದಳಿರಿಂದೆ ಚೆಲ್ವುವೆ
ತ್ತುದು ಕದಳೀದ್ರುಮಂ ಗ್ರಥಿಸೌಂದರಮಂಡನಕಾಳಿಕವ್ರಜಂ ೭೩

(ಕಾದಂಬರಿ ಉ. ಭಾ;೨೧೩)

ನಗಿಸುವ ಕೋಡಗಂ ನೆರೆದು ನೋಡುವ ದೀಹದ ಹುಲ್ಲೆ ಸೋಗೆಯಂ
ನೆಗಪಿ ತುಡುಂಕಿಮೆಟ್ಟುವ ನವಿಲ್ ಕಳಕೂಜನೆಗೆಯ್ವ ಪಾರಿವಂ
ನಗುವ ಶುಕಾಳಿಯಾಡುವ ಕುರಂಗವಡಂಗುಱುಚಾಟಮಂ ಪ್ರಿಯ
ರ್ಗೊಗೆಯಿಪವಂ ಗಜನ್ಮನ ಬೆಸಂಬಡೆದಂತೆ ಲತಾಗೃಹಂಗಳೊಳ್ ೭೪

ಎಲೆ ಜಲಜಾಸ್ಯೆ ನಿನ್ನನಯನೋತ್ಪಲಮಂ ಮಱಿದುಂಬಿ ಪತ್ತವಿ
ತ್ತಲೆ ಕವಿತಪ್ಪುವೆಂದವಳ ಕಣ್ಗೆ ನಿಮೀಲನಮಂ ನಿಮಿರ್ಚಿ ಕಾ
ದಲಳದರಾಗ್ರಮಂ ಸವಿದು ಪೀಡಿಸಿತೀಕೆಯ ವಕ್ತ್ರಪದ್ಮಮಂ
ನಲಿದಳಿಯೆಂದು ತಾಂ ಪುಸಿದನಾಕೆಗೆ ನಲ್ಲಳ ಸೀತ್ಕೃತಂಗಳಂ ೭೫

(ಲೀಲಾವತಿ ೧೩-೧೦೩)

ಮೊಗಮೀಸೆ ಬಾರದೋಪರ್
ಸೊಗಯಿಸಿ ಪೆಣ್ಬಾರಿಜನಿಟ್ಟು ಬರೆ ಪೂದಿಱಿವ
ಚ್ಚಿಗದಿಂದಮೆಯ್ದೆ ಮೆಚ್ಚಿನ
ಬಗೆಯಿಂ ಸ್ಮರಕೇಳಿಗೆಳಸಿದರ್ ಪುಂಶ್ಚಲಿಯರ್ ೭೬

(ಲೀಲಾವತಿ ೧೩-೧೦೭)

ಪೊಯ್ದುದು ಮಾಯ್ದದರ್ ತಿಱಿಯಲೀಯದೆ ಧೂಳಿಯನೆಂದು ಗಾಳಿಯಂ
ಬಯ್ದು ಪರಾಗಮಂ ತೊಡೆಯುತಂ ನಿಡುಗಂಗಳನೊತ್ತಿ ಮುಚ್ಚಿ ಕೊಂ
ಡೊಯ್ದತೆಮುಗ್ಧವಲ್ಲಭೆಯ ಕಣ್ಬೊಣರಂ ಪತಿ ತುಂಬಿ ಪೀರ್ವವೊಲ್
ನೆಯ್ದಿಲನೊದೆಯೂದಿ ಪರಿದುಂಬಿಸಿದಂ ನಗುತಂ ನೀಜೇಚ್ಛೆಯಿಂ ೭೭

(ಲೀಲಾವತಿ ೧೩-೧೦೪)

---

1 ಗೆಱಿ ( ಕ ಖ ಬ) 2 ಮಂ ( ಕ ಖ ಬ) 3 ಗೊಂಡೆ ( ಕ ಖ ಬ)

ಅಲರಾ[1]ಯ್ವ ಬಲೆಯ[1]ನೊಸಲೊಳ್
ಜಲಜಲಿಸುವ ಬೆಮರೊರಸಿ ಕಳೆವಿನಿಯನ ಮೆ
ಲ್ವ[2]ಲೆವ ತಳೆದಲೆ[2]ಪದಿಂ ತಂ
ಬೆಲರಲೆಪದೆ ಮುಗುಳ್ತ ಲತೆವೊಲೆಯ್ದೆ ಬೆಮರ್ತಳ್ ೭೮

(ಲೀಲಾವತಿ ೧೩-೧೦೫)

ಗಿಳಿಗಳೊಡಗೞಿಪಿ ಮೊರೆವಳಿ
ಕುಳದೊಡಗಾಣಯ್ಸಿ ಪುರುಳಿಯೊಳಗೆಳಸಿ ನವಿ
ಲ್ಗಳ ಬಳಗದೊಳಗೆ ನರ್ತಿಸಿ
ವಿಳಾಸಿನೀನಿಕರಮಾಗಳೇಂ ದಳ್ಳಿಸಿತೋ ೭೯

ಕರಗಮನೆತ್ತು [3]ನೀರ[3]ಳಿಕೆ ಕಾಲ್ದೊಳೆ ಮಾಳಿನಿ ತೀರ್ಚುೞ ಬೋನಮಂ
[4]ಸ[4]ರಳಿಕೆ ಪಾಸುಗ[5]ದ್ದು[5]ಗೆಯನುತ್ಪಳಿನೀ ಕೆಲಹೊತ್ತು ಚಿತ್ರಿಕೇ
ಪರಿಯಣಮಂ ನೃಪೇಶ್ವರಿಯನಾರೊಗಿಸಲ್ ಕರೆ ಮಂಜುಘೋಷೆಯೆಂ
ದರಸಿಗೆ ಬೋನಮೆತ್ತುಲುಲಿದೆ[6]ತ್ತು ವನಾಂತದೊಳಂಗನಾಜನಂ[6] ೮೦

(ಅನಂತನಾಥ ಪುರಾಣಂ ೪-೮೫)

ಕರಿರಿಪು ಪೀಠಮಂ ತೊಡೆದು ಪಾಸುವ ಕತ್ತುರಿನೀರಧಾರೆಯಂ
ಪರಪುವ ಮುತ್ತಿನೆಕ್ಕಸರಮಂ ಕಡೆಯಿಕ್ಕುವ ಪಾತಿಜಾತದೊ
ಳ್ಪರಲನುದಿರ್ಚುವಿರ್ತರದ ಗದ್ದುಗೆಯಿಕ್ಕುವ ಸಂಭ್ರಮಂಗಳಿಂ
ಪರಿಮರಿಯಾಡಿದರ್ [7]ನವಲತಾಗೃಹಪಂಕ್ತಿಯೊಳಂಗನಾಜನಂ[7] ೮೧

(ಅನಂತನಾಥ ಪುರಾಣಂ ೪-೮೬)

[8]ದೇವಿ[8]ನಿಜವದ[8]ನವಿಧುಗೀ
ತಾ[9]ವರೆ ಸೋಲ್ತತ್ತು ಬಯ ತಂಬುಲಮಂ ನೀ
ನೀವುದೆನಿಪಂತೆ ಪಚ್ಚೆಯೆ
ಕಾವಿನ ಮಾಣಿಕದ ಡವಕೆ [10] ವಿಡಿದಳದೊ [10] ರ್ವಳ್ ೮೨

(ಅನಂತನಾಥ ಪುರಾಣಂ ೪-೮೪)

ತುಱಿಕಲಡುಗೆಗಳೊಳೇಂ ಪೞ
ಗೞವೆಯ ಕೂಱ್ತಿವುಡುಗಳೆದ ತೊವರಿಯ ತೊವೆ ಕಾ

---

1 ಯ್ದು ಬ=ಲೆ () 2 ಲೆ ತವಳಲೇ ( ಖ ಬ) 3 ಶೀತ(ಅ) 4 ತ (ಅ) 5 ದ್ವಿ (ಅ) 6 ತ್ತಮರೇಂದ್ರಮಹತ್ತರೀಜನಂ (ಅ) 7 ಸುದತಿಯೋಲಗಸಾಲೆಯೊಳಿಂದ್ರಕಾಂತೆಯರ್ (ಅ) 8 ತೀವೆ ( ಕ ಖ ಬ) 9 ನೆ ನಡುಗಿತ್ತಾ( ಖ ಬ) 10 ನೀಡಿದಳೊ ( ಖ ಬ)

ಯ್ತಿೞಿಪಿದ ತುಪ್ಪಂ ಕೋಡುವ
ಕೞಲಲ್ಲದೆ ದಿವ್ಯ ಭೋಜನಂ ಪೆಱತುಂಟೇ ೮೩

(ಕಾವ್ಯಾವಲೋಕನಂ ೨೪೧)

ಸಿತಮಿಶ್ರಿತ ಘೃತಪೂರಂ
ಸಿತಮಿಶ್ರಿತ ಸುರಭಿಗಂಧಕದಳಂ ಸದಳಂ
ಸಿತದುಗ್ಧಪೂರಮೆಸೆದಿರೆ
ಸಿತನಿಷ್ಪಿಂಡಮನಭಂಡಮಂ ಮುಟ್ಟುವುದೇ ೮೪

ಬಗಿದಗುೞೊಂದದಂತೆ ತೆಗೆದಾಱಿಸಿದೋಗರದೊಳ್ ಪೊದೞ್ದು ಕ
ಮ್ಮಗೆ ಕೆನೆಗೊಂಡ ಗಡ್ಡೆ ಮೊಸರನಂ ಸುರಿದೇಲೆಯಚೂರ್ಣವಿಕ್ಕಿ ಕಾ
ಯ್ದೊಗುಮಿಗೆ ಬೇಳೆಗೆಯ್ದ ಮೆಣಸಂ ತಳಿದಲ್ಲದ ಚಲ್ಲಿಯಂ ಪವ
ಣ್ಬುಗೆ ಕಲಸಿರ್ದ ತಣ್ಗಲಸುಗೂೞನಿಳಾಪತಿಗಿತ್ತನಿೞ್ತೆಯಿಂ ೮೫

(ಲೀಲಾವತಿ ೫-೭೦)

ಪಿಪ್ಪಲಿ ಚಿಲ್ಲಕಾಯ್ ಮೆಣಸು ಮಾಗುಳಿವೇರ್ ಮೊಳೆಯಲ್ಲಮೇಲೆ ಕ
ಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯಂಬಟೆ ನಿಂಬೆ ನೆಲ್ಲಿಗಾಯ್
ಕಪ್ಪುರಗಂಪನೊಪ್ಪಿಸುತಮಿರ್ಪರೆಮಾದುಫಲಂಗಳಾದಿಯಾ
ದುಪ್ಪಿನಕಾಯ್ಗಳಂ ಮಗಮಗಿಪ್ಪುವನಿಕ್ಕಿದನಬ್ಜಪತ್ರದೊಳ್ ೮೬

(ಲೀಲಾವತಿ ೫-೭೧)

ಗಾವಟೆ ಬೆಲ್ಲವತ್ತವರ ಮಾದಲವಂಬಟೆ ಚಿಲ್ಲು ಚೆಳ್ಳೆಗಾ
ಯಾಮವಿನಕಾಯ್ಗಳೊಪ್ಪುವರಗಪ್ಪುರಮಾಗುಳಿಗಳ್ ಸುಧಾರಸಂ
ತೀವಿರೆ ಕಂಪು ಪೊಂಪುಳಿಸೆಯುಪ್ಪಿನಕಾಯ್ಗಳನೇಕಮಂ ಕಲಾ
ಕೋವಿದೆಯರ್ ಕೆಲಂಬರಿಯಲಿಕ್ಕಿದರಿಕ್ಕು ಮಗುೞ್ನುತ್ತಿರಲ್ ೮೭

(ನಳಚಂಪು ೪೬೨)

ನಳನಳಿಸುವ ಮೆಣಸಿನ ಕರೆ
ಹುಳಿಯಲ್ಲಂಬಿದಿರ ಕೞಲೆಯೇಲಕ್ಕೀಕಾಯ್
ಕಳವೆಯ ಕಾಯ್ ನೇರಿಯ ಕಾಯ್
ಮೊಳಗಿನ ಕಾಯ್ ಬೇೞ್ ಬೇೞ್ ಸವಿವಡೆದಿರವೇ* ೮೮

(ನಳಚಂಪು ೪೬೩)

ಕಡಲೆಯು ಬೆಡಿ ಬೆಮದುರುಳಿಗೊಂಡುದು ಸೊಂಡಗೆಕೂಡೆ ಸಂಬರಂ
ಬಿಡದಗಸುಂಟುಗೊಂಡುದು ಮೊಸರ್ ಕೆನೆಗೊಂಡುದು ತುಪ್ಪಮಿಂಪನೊಂ

★ ಈ ಪದ್ಯ (ಕ) ಪ್ರತಿಯಲ್ಲಿಲ್ಲ.

